# ಹುಣಸೂರು ಹತ್ತಿರ ಜಮೀನು ಕಬಳಿಸಲು ದುಷ್ಕೃತ್ಯ

## ಸವರ್ಣೀಯರಿಂದ ದಲಿತನ ಇಬ್ಬರು ಮಕ್ಕಳ ಬಲಿ : ಹೆಂಡತಿ ಮಕ್ಕಳು ನಾಪತ್ತೆ

[ವರದಿ : ಹುಣಸೂರು ಪ್ರತಿನಿಧಿಯಿಂದ]

ಇಂಡಿಯಾ ದೇಶದಲ್ಲಿ ದಿಕ್ಕು ದೆಸೆ ಇಲ್ಲದ ದಲಿತರನ್ನ ಸವರ್ಣೀಯ ಬಂಡವಾಳ ಶಾಹಿಗಳು ಹೇಗೆ ಚಿತ್ರ ಹಿಂಸೆಗೆ ಒಳಪಡಿಸುತ್ತಾರೆ ಅನ್ನುವುದಕ್ಕೆ ಹುಣಸೂರು ಬಳಿ ದಲಿತನೊಬ್ಬನ ಮೇಲೆ ನಡೆದಿರುವ ಕರಾಳ ಕೃತ್ಯ ಉತ್ತಮ ಉದಾಹರಣೆ ಯಾಗುತ್ತದೆ.

ಹುಣಸೂರು ತಾ|| ಬಿಳಿಕೆರೆ ಹೋ|| ದೇವನಹಳ್ಳಿ ಗ್ರಾಮದಲ್ಲಿ ರಾಮಯ್ಯನೆಂಬ ದಲಿತ ಈಗ್ಗೆ 30 ವರ್ಷಗಳಿಂದಲೂ ನಾಲ್ಕು ಎಕರೆ ಜಮೀನನ್ನ ಸಾಗುವಳಿ ಮಾಡಿಕೊಂಡಿದ್ದ. ಇದು ಕರಿಮುದ್ದನಹಳ್ಳಿ ಬ್ಲಾಕ್‌ಗೆ ಸೇರಿದ 7ನೇ ಸರ್ವೆ ನಂಬರಿನ ಜಮೀನು. ಭಯಂಕರವಾಗಿದ್ದ ಕಾಡನ್ನ ಕಡಿದು ಉತ್ತು ಜಮೀನನ್ನ ರಾಮಯ್ಯ ಹದಕ್ಕೆ ತಂದಿದ್ದ. ಅದು ಕೆರೆ ಹಿಂದ ಗಡೆ ಭೂಮಿಯಾದ್ದರಿಂದ ಕೆರೆ ತುಂಬಿದಾಗಲೆಲ್ಲ ರಾಮಯ್ಯ ಬೆಳೆಮಾಡಿ ಬದುಕುತ್ತಿದ್ದ. ಗಂಡ ಹೆಂಡತಿ ಜತೆಗೆ ಎಂಟು ಮಕ್ಕಳು ಎಲ್ಲರಿಗೂ ಸಾಕಾಗದೆ ಬಿಡುವಿನ ವೇಳೆ ಚಪ್ಪಲಿ ಕೂಡ ಹೊಲಿಯುತ್ತಿದ್ದ.



ದಲಿತರ ಬಂಡಾಯದ ಕೂಗು

# ಪಂಚಮ

ಸಂಪುಟ: 2 ಸಂಚಿಕೆ: 10-11 ● ಪಾಕ್ಷಿಕ ● 40 ಪೈಸೆ ● 5—20 ಡಿಸೆಂಬರ್ 1977

### ಗೌಡರು ಬಂದರು

ಈಗ್ಗೆ ನಾಲ್ಕು ವರ್ಷದ ಹಿಂದೆ ಹುಣಸೂರು ತಾಲ್ಲೂಕಿನವರೇ ಆದ ಮಸುಗನಹಳ್ಳಿ ವೆಂಕಟಗಿರಿಗೌಡರು ಬಂದು ರಾಮಯ್ಯನಿಗೆ ಹೆದರಿಸಿದರು. "ನೀನು ಮಾಡ್ತಾಇರೋ ಜಮೀನು ನಂದು, ಮರ್ಯಾದಿಂದ ಬುಟ್ಟುಡು" ಅಂದರು. ಕಾಡು ಕಡಿದು ಬೇರು ತೆಗೆದು ಬೆವರು ಸುರಿಸಿದ ರಾಮಯ್ಯನಿಗೆ ಆಶ್ಚರ್ಯವಾಯ್ತು. ಗೌಡರಿಗೆ ಕೈಮುಗಿದು "ನಾನು ಬಡವ ಇಷ್ಟೊರ್ಸದಿಂದ ಮಾಡ್ತಾ ಇವ್ನಿ, ಸಾಗವಳೀನೂ ಕೊಡ್ತೀವಿ ಅಂತ ಹೇಳವ್ರೆ ನಮ್ಗೆ ತೊಂದ್ರೆ ಕೊಡ್ಬ್ಯಾಡಿ" ಅಂತ ಗೋಗರೆದ. ಗೌಡರು ದಬಾಯಿಸಿ ಜಮೀನು ಬಿಡದಿದ್ದರೆ ಸರ್‍ಯಾಗಿ ಮಾಡ್ಬೇಕಾಯ್ತದೆ ಅಂತ ಹೆದರಿಸಿ ಹೋದರು.

[2ನೇ ಪುಟಕ್ಕೆ]

# ಭದ್ರಾವತಿ ಸಮೀಪ ಜಮೀನು ವಿವಾದ; ಕೊಲೆ

## ಮಹಜರ್‌ಗೆ ಗುಮಾನಿ ವ್ಯಕ್ತಿಯದೇ ಸಹಿ; ಪೋಲೀಸ್ ನಿರ್ಲಕ್ಷ್ಯ

[ವರದಿ: ನಮ್ಮ ಪ್ರತಿನಿಧಿಯಿಂದ]

ಭದ್ರಾವತಿ ತಾಲೂಕಿನ ಅರಕೇರಿಯಲ್ಲಿ ನವೆಂಬರ್ 12 ರಂದು ಹರಿಜನ ಪತ್ರಿಸಂಗಪ್ಪ ಎಂಬುವನನ್ನು ಭೀಕರವಾಗಿ ಕೊಲೆ ಮಾಡಲಾಗಿದೆ. ಈ ಕೊಲೆಯನ್ನು ಅರಕೆರೆಯ ಜಮೀನ್ದಾರ ಲೋಕೇಶಪ್ಪ ಎಂಬುವನೇ ಮಾಡಿರುವ ಗುಮಾನಿ ಇದ್ದು-ಲೋಕೇಶಪ್ಪನಿಗೂ-ಕೊಲೆ ಮಾಡಿರುವ ಸಂಗಪ್ಪನಿಗೂ ಜಮೀನು ಸಂಬಂಧ ಮತ್ತು ಜೀತ ಸಂಬಂಧ ತೊಡಗಿತ್ತು. ಮತ್ತು ಕೊಲೆಯಾಗಿರುವ ರಾತ್ರಿಯೇ ಲೋಕೇಶಪ್ಪ ಸಂಗಪ್ಪನನ್ನು ತನ್ನೊಟ್ಟಿಗೆ ಕರೆದುಕೊಂಡು ಹೋಗಿದ್ದ. ಸಂಗಪ್ಪನ ಪತ್ನಿ ಮತ್ತು ಸಂಬಂಧಿಗಳು ಲೋಕೇಶಪ್ಪನೇ ಕೊಲೆ ಮಾಡಿದ್ದಾನೆಂದು ಹೇಳುತ್ತಿದ್ದರೂ ಅತನ ಮೇಲೆ ಯಾವುದೇ ಕ್ರಮ ತೆಗೆದುಕೊಳ್ಳದೆ. ಹೆಣ ಮಹಜರ್‌ಗೆ ಅತನ ಸಹಿಯನ್ನೇ ತೆಗೆದುಕೊಂಡಿರುವುದು ಜೋದ್ಯ ಸಂಗತಿಯಾಗಿದ್ದು, ಈ ಕೊಲೆಯನ್ನ ಈಗ ಮುಚ್ಚುವ ಪ್ರಯತ್ನ ನಡೆಯುತ್ತಿದೆ.

ಪತ್ರಿಸಂಗಪ್ಪ ಲೋಕೇಶಪ್ಪನ ಮನೆಯಲ್ಲಿ 15 ವರ್ಷಗಳಿಂದಲೂ ಜೀತಮಾಡುತ್ತಿದ್ದು ಲೋಕೇಶಪ್ಪ ಕೊಡುತ್ತಿದ್ದ ಹಿಂಸೆ ತಾಳಲಾರದೆ 1972ನೇ ಇಸವಿಯಲ್ಲಿ ಅರಕೇರಿ ಬಿಟ್ಟು ಓಡಿಹೋಗಿ ಸಂತೆಕಡೂರಿನ ಗೋವಿಂದಪ್ಪನವರಲ್ಲಿ ಜೀತಕ್ಕೆ ಸೇರಿಕೊಂಡ. ಅಗ ಲೋಕೇಶಪ್ಪ ಸಂಗಪ್ಪನನ್ನು ಹುಡುಕಿಸಿ ಸಿಗದಿದ್ದಾಗ ಸುಮ್ಮನಾಗಿದ್ದ. 4 ವರ್ಷಗಳ ನಂತರ ಸಂಗಪ್ಪ ಸಂತೆ ಕಡೂರಿನಲ್ಲಿದ್ದಾನೆ ಎಂದು ತಿಳಿದು, ಅತನನ್ನ ಅನಾಮತ್ತಾಗಿ ಹೊತ್ತು ತರಲು ಜನ ಕೂಡಿಕೊಂಡು ಹೊರಟ. ಲೋಕೇಶಪ್ಪನಿಗೆ ಈ ಮಧ್ಯೆ ಗೋವಿಂದಪ್ಪನವರ ಪ್ರವೇಶದಿಂದ ಮುಖಭಂಗವಾಗಿ ತೆಪ್ಪನೆ ಬರಬೇಕಾಯಿತು.

ಸಂಗಪ್ಪ ಲೋಕೇಶಪ್ಪನ ಮನೆಯಲ್ಲಿ ಜೀತವಿದ್ದಾಗ ಅತನಿಗೆ ದರಕಾಸ್ತಿನಲ್ಲಿ ¼ ಎಕರೆ ಜಮೀನು ಮಂಜೂರಾಗಿತ್ತು. ಈ ಜಮೀನನ್ನ ಲೋಕೇಶಪ್ಪ ತನ್ನಂತೆ ಮಾಡಿಕೊಂಡವನೆ ಆ ಜಮೀನನ್ನು ಬೇರೊಬ್ಬರಿಗೆ 4000 ರೂ.ಗಳಿಗೆ ಮಾರಿದ್ದ. ಈ ವಿಷಯ ತಿಳಿದ ಸಂಗಪ್ಪ ಭದ್ರಾವತಿಯ ಕಿಸಾನ್ ಸೆಲ್‌ಗೆ ದೂರು ಕೊಟ್ಟಾಗ ಸೆಲ್ ಅಧಿಕಾರಿಗಳ ಮುಂದೆ ಲೋಕೇಶಪ್ಪ ಸಂಗಪ್ಪನಿಗೆ ಜಮೀನು ಬಿಟ್ಟುಕೊಡುತ್ತೇನೆಂದು ಪ್ರಮಾಣಮಾಡಿದರೂ ಬಿಟ್ಟುಕೊಡಲಿಲ್ಲ.

ಈಗ್ಗೆ ನಾಲ್ಕು ತಿಂಗಳ ಹಿಂದೆ ಸಂತೆ ಕಡೂರಿನಿಂದ ಸಂಗಪ್ಪ ಅರಕೇರಿಗೆ ವಾಪಸು ಬಂದ. ಲೋಕೇಶಪ್ಪನನ್ನ ತನ್ನ ಜಮೀನು ಬಿಟ್ಟುಕೊಡಬೇಕೆಂದು ಪೀಡಿಸತೊಡಗಿದ. ಲೋಕೇಶಪ್ಪ ಇವತ್ತು ನಾಳೆ ಎಂದು ಒತ್ತುತ್ತಲೇ ಬಂದ. ಇದರಿಂದ ಸಂಗಪ್ಪನ ಮೇಲೆ ಲೋಕೇಶಪ್ಪನಿಗೆ ಒಳಗೊಳಗೇ ದ್ವೇಷ ಕುದಿಯತೊಡಗಿತು.

ನವೆಂಬರ್ 12ನೇ ತಾರೀಖು ದೀಪಾವಳಿ ಹಬ್ಬ. ಅಂದು ಶನಿವಾರ ರಾತ್ರಿ ಊಟ

[6ನೇ ಪುಟಕ್ಕೆ

# ಭದ್ರಾವತಿಯಿಂದ ಶಿವಮೊಗ್ಗಕ್ಕೆ ದಲಿತರ ಬೃಹತ್ ಜಾತಾ

[ವರದಿ : ನಮ್ಮ ಪ್ರತಿನಿಧಿಯಿಂದ]

ಭದ್ರಾವತಿ ತಾಲ್ಲೂಕು ಸಿದ್ಲಿಪುರ ಗ್ರಾಮ ಸ. ನಂ. 8ರಲ್ಲಿರುವ 31 ಎಕರೆ 9 ಗುಂಟೆ ಭೂಮಿ ಹರಿಜನರ ಉಂಬಳಿ ಜಮೀನು. ಇದನ್ನು ಭೂಪಾಳಂ ಸಹೋದರರು ಅಕ್ರಮ ಸಾಗುವಳಿ ಮಾಡಲು ದಲಿತರು ಪ್ರತಿಭಟಿಸಿ ಭೂ ಆಕ್ರಮಣ ಮಾಡಿ ಜೈಲುವಾಸ ಕಂಡರು. ದಲಿತ ಸಂಘರ್ಷ ಸಮಿತಿ ಕಳೆದ 25 ದಿನಗಳಿಂದ ಅಕ್ರಮ ಸಾಗುವಳಿ ವಿರೋಧಿಸಿ ಭದ್ರಾವತಿ ತಾಲೂಕು ಕಛೇರಿ ಮುಂದೆ ಸರದಿ ಸತ್ಯಾಗ್ರಹ ಮಾಡುತ್ತಿರುವುದಲ್ಲದೆ, 50 ಹಳ್ಳಿ ದಲಿತರನ್ನ ಸಂಘಟಿಸಿ ಭದ್ರಾವತಿಯಿಂದ ಶಿವಮೊಗ್ಗೆಗೆ ಜಾತಾ ಏರ್ಪಡಿಸಿತು. ಪ್ರತಿ ಹಳ್ಳಿಯಿಂದ 5-10 ದಲಿತರಂತೆ, ಸುಮಾರು 700 ಜನ ದಲಿತರು ಭದ್ರಾವತಿಯಲ್ಲಿ ಸೇರಿದರು. ತಮ್ಮ ಅಸಂಖ ಬಂಧುಗಳನ್ನ ಕಂಡು ಸ್ತ್ರೀಯರು ಮುದುಕರು ಸಿಡಿಲಿನ ಕಿಡಿಗಳಾದರು. "ದಲಿತ ಕ್ರಾಂತಿ ಚಿರಾಯುವಾಗಲಿ" ಎಂಬ ಅವರ ಒಕ್ಕೊರಲಿನ ಕೂಗು ಭದ್ರಾವತಿ ಹೃದಯವನ್ನ ನಡುಗಿಸಿತು ಹಸಿದಹೊಟ್ಟೆ ಹರುಕುಬಟ್ಟೆ ದಲಿತ ಸೇನೆಯನ್ನು ಕಂಡು ಅಧಿಕಾರಿಗಳು ನಿಬ್ಬೆರಗಾದರು. ಘೋಷಣೆಗಳೊಂದಿಗೆ ಭದ್ರಾವತಿ ಮುಖ್ಯ ಬೀದಿಗಳಲ್ಲಿ ಮೆರವಣಿಗೆ ಹೊರಟಿತು. ತಮ್ಮನ್ನು ನುಂಗುವ ಮಾರಿ ಎದ್ದು ಬಂದಂತೆ ಸಾಗುತ್ತಿದ್ದ ದಲಿತರನ್ನು ಕಂಡು ಪ್ರೇಕ್ಷಕರ ಮುಖಗಳು ಭೀತಿಯಿಂದ ಕಪ್ಪಿಟ್ಟವು.

ಮಧ್ಯಾಹ್ನದ ಬಿಸಿಲಿನ ಹೊಡೆತ, ಬೀಸುವ ಬಿರುಗಾಳಿ ಲೆಕ್ಕಿಸದೆ 20 ಕಿಲೋ ಮೀಟರ್ ಜಾತಾ ಸಾಗಿತು. ಮುದುಕರು ಬಸವಳಿದರು, ಕಾಲುಗಳಿಂದ ರಕ್ತ ಸೋರತೊಡಗಿತು, ಮುದುಕಿಯರು ನಡೆಯಲಾರದೆ ಕುಸಿದರು. ಆದರೂ 11 ಘಂಟೆಗೆ ಭದ್ರಾವತಿ ಬಿಟ್ಟ ಜಾತಾ ಸುಮಾರು 4-30 ಘಂಟೆಗೆ ಶಿವಮೊಗ್ಗ ತಲುಪಿತು.

ಶಿವಮೊಗ್ಗ ತಲುಪುತ್ತಿದ್ದಂತೆ ದಲಿತರಲ್ಲಿ ಮತ್ತೆ ಶಕ್ತಿ ಪ್ರಾರಂಭವಾಯಿತು. ಹಿಂದೆಂದೂ ಕಾಣದ ದಲಿತ ಚಳುವಳಿ ಕಂಡು ಜನತೆ ದಿಗ್ಭ್ರಾಂತಿಗೊಂಡಿತು. ಮಾರಿಯ ಪಿಡುಗು ಬಂದಂತೆ ಬರುತ್ತಿದ್ದ ಜಾತಾ ಸುದ್ದಿ ಕೇಳಿ ಅಧಿಕಾರಿಗಳು ಆಫೀಸು ಬಿಟ್ಟು ಮನೆ ಸೇರಿದರು. ಕಡಲಿನ ಮೊರೆತದೊಂದಿಗೆ ಡಿ.ಸಿ. ಆಫೀಸಿನ ಮುಂದೆ ಜಾತಾ ತಂಗಿತು. ಹೆಡ್ ಕ್ವಾರ್ಟರ್ ಅಸಿಸ್ಟೆಂಟ್‌ರವರು ಸ್ಥಳದಲ್ಲಿ ಹಾಜರಿದ್ದು ಡಿ.ಸಿ. ಸ್ಪೆಶಲ್ ಡಿ.ಸಿ. ಯಾರೂ ಊರಲ್ಲಿ ಇಲ್ಲವೆಂತಲೂ, ನಿಮ್ಮ ಮನವಿ ಅವರಿಗೆ ಸಲ್ಲಿಸುವುದಾಗಿ ಆಶ್ವಾಸನೆ ನೀಡಿದರೂ, ದ.ಸ.ಸ. ಕಾರ್ಯಕರ್ತರು ಡಿ.ಸಿ. ಯವರನ್ನ ಸ್ಥಳಕ್ಕೆ ಕರೆತರುವಂತೆ ಆಗ್ರಹಿಸಿದ್ದರು.

ಸುದ್ದಿ ತಿಳಿದು ಸ್ಥಳಕ್ಕೆ ಧಾವಿಸಿ ಬಂದ ಶಾಸಕ ಶ್ರೀ ಕೋಣಂದೂರು ಲಿಂಗಪ್ಪನವರು "ದಲಿತರಿಗೆ ನ್ಯಾಯ ದೊರಕಿಸಿ ಕೊಡುತ್ತೇವೆಂತಲೂ, ದಲಿತ ವಿರೋಧಿಗಳನ್ನು ಜನತಾ ಪಕ್ಷದಿಂದ ಹೊರಹಾಕುತ್ತೇವೆಂತಲೂ" ಆಶ್ವಾಸನೆ ನೀಡಿದರು. ಶ್ರೀ ಬಿ. ಕೃಷ್ಣಪ್ಪ ಮತ್ತು ದ.ಸ.ಸ. ಅಧ್ಯಕ್ಷ ಎಸ್.ಗಿರಿಯಪ್ಪನವರು ದಲಿತ ಸಂಘಟನೆಯ ಅನಿವಾರ್ಯತೆಯನ್ನು ಕುರಿತು ಮಾತನಾಡಿದರು. ತೋಟಿ ತಲಾಟಿ - ಇನಾಮತಿ ಭೂಮಿ ದಲಿತರಿಗೆ ರಕ್ಷಿಸಿಕೊಡಬೇಕು. ಗೋಮಾಳ, ಖಾಲಿ ಭೂಮಿಯಲ್ಲಿ 50 /. ದಲಿತರಿಗೆ ಮಂಜೂರು ಮಾಡಬೇಕು. ಸೈಟು ನಿವೇಶನ ಗ್ರ್ಯಾಂಟ್ ಕೂಡಲೆ ಹಂಚಬೇಕು ದಲಿತರ ಮೇಲಿನ ಗ್ರಾಮಾಂತರ ಹತ್ಯಾಕಾಂಡ ತಕ್ಷಣ ನಿಲ್ಲಬೇಕು ತಪ್ಪಿದಲ್ಲಿ ಹೋರಾಟದ ಅನಿವಾರ್ಯತೆಯನ್ನು ಕುರಿತು ಮನವಿಯನ್ನು ಅರ್ಪಿಸಲಾಯಿತು. ●

# ಜಮೀನು, ಮನೆ, ಹೆಂಡತಿ ಮಕ್ಕಳನ್ನು ಕಳೆದುಕೊಂಡ ದಲಿತನ ತಪ್ತ ಸ್ಥಿತಿ

(1ನೇ ಪುಟದಿಂದ)

**ಲಾರಿ ಬಂತು ಲಾರಿ !**

ಗೌಡರಿಂದ ತೊಂದರೆಯಾಗುತ್ತದೆ ಅಂತ ಹೆದರಿದ ರಾಮಯ್ಯ ಪೋಲೀಸ್ ಕಂಪ್ಲೈಂಟ್ ಕೊಟ್ಟ. ಹುಣಸೂರಿನ ಪುರ ಪ್ರಮುಖರೆಲ್ಲರಿಗೂ ಬರೆದುಕೊಂಡ. ಬೇಗನೆ ಸಾಗುವಳಿ ಚೀಟಿಕೊಡಿಸಿ ಅಂತ ತಹಶೀಲ್ದಾರರಿಗೂ ಅರ್ಜಿ ಬರೆದುಕೊಂಡ. ಯಾವುದೂ ಪ್ರಯೋಜನವಾಗಲಿಲ್ಲ. ಈ ನಡುವೆ ಒಂದು ದಿನ ರಾಮಯ್ಯನ ಮನೆ ಮುಂದೆ ಲಾರಿಯೊಂದು ಬಂತು. ಲಾರಿಯಲ್ಲಿ ಸುಮಾರು ಎಂಟು ಹತ್ತು ಜನ ಇದ್ದರು. ರಾಮಯ್ಯನನ್ನು ಬಲವಂತ ಮಾಡಿ ಲಾರಿಗೆ ಹತ್ತಿಸಿದರು. ಲಾರಿ ಹೊರಟೇ ಬಿಟ್ಟಿತು. ಅವನು ಹೆದರಿ ಕಂಗಾಲಾದ. ಲಾರಿಯೊಳಗೆ ವೆಂಕಟಗಿರಿಗೌಡರೂ ಇದ್ದುದ ಕಂಡಾಗಂತೂ ರಾಮಯ್ಯ ಭೂಮಿಯೊಳಕ್ಕೆ ಇಳಿದು ಬಿಟ್ಟವನಂತೆ ಹೆದರಿದ. ಕರಿಮುದ್ದನಹಳ್ಳಿಯಾಚೆ ಹೋಗಿ ಲಾರಿ ನಿಂತಿತು. ಲಾರಿಯಲ್ಲಿದ್ದ ಗೂಂಡಾಗಳು ರಾಮಯ್ಯನಿಗೆ ಹೇಳಿದರು 'ಮರ್ಯಾದಿಯಿಂದ ಜಮೀನ್ನ ಬುಟ್ಬೊಡು, ಇಲ್ದಿದ್ರೆ ' ಅಂತ ಕೈ ಎತ್ತಿದರು. ರಾಮ[illegible] ಯ್ಯನಿಗೆ ತನ್ನ [illegible] ಹೆಂಡತಿ ಮಕ್ಕಳ ನೆನಪಾಯ್ತು. ಕೈ ಮುಗಿದು ಕಾಲು ಹಿಡಿದು " ಜಮೀನ್ನ ಬುಟ್ಬುಡ್ತೀನಿ ನನ್ನ ಸಾಯಿಸ್ಬೇಡಿ " ಅಂತ ಬೇಡಿಕೊಂಡ. ಬಡ್ಡಿಮಗ್ನೆ ಕನ್ನಂಬಾಡಿಕಟ್ಟೆ ಕಾಣಿಸ್ಬುಡ್ತೀನಿ ' ಅಂತ ವೆಂಕಟಗಿರಿ ಗೌಡರು ಅವನನ್ನ ಅಲ್ಲಿಯೇ ತಳ್ಳಿ ಹೊರಟುಹೋದರು.

**ಹೋದರು.... ಬಂದರು.... ಸತ್ತರು**

ಇದು ನಡೆದು ಕೇವಲ ಎಂಟೇ ದಿನ ಕಳೆದಿದ್ದವು. ರಾಮಯ್ಯನಿಗಾದ ಗತಿ ಕಂಡ ಹೆಂಡತಿ ಮಕ್ಕಳು ಉಸಿರಾಡಲಾರದಷ್ಟು ಹೆದರಿ ಹೋಗಿದ್ದರು. ಒಂದು ದಿನ ಯಾರದೋ ಹೊಲಕ್ಕೆ ಕಳೆ ಕೆಲಸಕ್ಕೆ ಹೋದ 18 ವರ್ಷದ ಮಗಳು 16 ವರ್ಷದ ಮಗ ಬಂದವರೇ ಮಲಗಿಬಿಟ್ಟರು. ರಾಮಯ್ಯನಿಗೆ ಹೆದರಿಕೆಯಾಯ್ತು ಏನು ಎತ್ತ ಒಂದೂ ತಿಳಿಯಲಿಲ್ಲ. ಬೆಳಕರಿಯುವಷ್ಟರಲ್ಲಿ ಇಬ್ಬರೂ ಹೆಣವಾಗಿದ್ದರು. ರಾಮಯ್ಯನಿಗೆ ಭೂಮಿಯೇ ಬಾಯ್ಬಿಟ್ಟಂಗಾಯ್ತು. ಮತ್ತೆ ಪೋಲೀಸರಿಗೆ ದೂರುಕೊಟ್ಟ. ಯಾವೊಂದು ಕಾಯಿಲೆಯೂ ಇಲ್ಲದ ಮಕ್ಕಳು ಇದ್ದಕ್ಕಿದ್ದಂತೆ ಸತ್ತದ್ದು ಅವನಿಗೆ ಒಗಟಾಗಿತ್ತು. ಈ ಹಿಂದೆ ಯಾರ ಕೈವಾಡವಿದೆ ಅಂತ ಅವನಿಗೆ ಗೊತ್ತಿದ್ದೂ ಅಸಹಾಯಕನಾಗಿದ್ದ.

**ಕಸದ ಬುಟ್ಟಿಗೆ ?**

ರಾಮಯ್ಯ ಕಾದ. ಪೋಲೀಸ್ ದೂರು ಕೊಟ್ಟು ಸಾಕಷ್ಟು ದಿನವಾದರೂ ಅವರು ಬರಲಿಲ್ಲ. ಹುಣಸೂರು ಪ್ರಮುಖ ರಾಜಕಾರಣಿಗಳಿಗೆ ಬರೆದುಕೊಂಡ ಅರ್ಜಿಗಳಿಗೂ ಪ್ರತಿಕ್ರಿಯ ಬರಲಿಲ್ಲ. ಒಂದು ದಿನ ಅವನೇ ಹುಣಸೂರಿನ ಹಾದಿ ಸವೆಸಿದ. ಪೋಲೀಸ್ ಠಾಣೆಗೆ ಹೋಗಿ ಕೇಳಿದ. ಅವರು 'ನೀನು ಕಂಪ್ಲೇಂಟ್ ಯಾವಾಗ ಕೊಟ್ಟಿದ್ದೆ' ಎಂದರು. ಕಾಂಗ್ರೆಸ್ ಎಂ.ಎಲ್.ಸಿ ಯೊಬ್ಬರು " ಜಮೀನ್ ಬುಟ್ಬುಟ್ಟು ಸುಮ್ನಿರಯ್ಯ " ಅಂದರು. ಮುಖ ಒಣಗಿಸಿಕೊಂಡು ರಾಮಯ್ಯ ಹಿಂದಿರುಗಿದ. ಈ ನಡುವೆ ಜಮೀನು ಪಾಳುಬಿತ್ತು. ಅಲ್ಲಿ ಇಲ್ಲಿ ಸುತ್ತಾಡತೊಡಗಿದ್ದರಿಂದ ಮನೆಯಲ್ಲಿ ಅಂಬಲಿ ಇಲ್ಲದೆ ಹಸಿದಿರಬೇಕಾಯ್ತು. ಕೆಲವೇ ದಿನಗಳಲ್ಲಿ ರಾಮಯ್ಯ ಹಾಸಿಗೆ ಹಿಡಿದ. ಜಮೀನು ಮಾತ್ರ ಹಾಗೇ ಇತ್ತು.

**ಕಾಣೆಯಾದ ಹೆಂಡತಿ - ಮಕ್ಕಳು**

ರೋಗ ಬಿಗಡಾಯಿಸಿದ್ದರಿಂದ ರಾಮಯ್ಯ ಆಸ್ಪತ್ರೆ ಸೇರಿದ. ಮನೆಯ ಸಂಬಂಧವೇ ಕೆಲವು ದಿನಗಳವರೆಗೆ ಕಡಿದುಹೋಯ್ತು. ತಿಂಗಳು ಬಿಟ್ಟು ರಾಮಯ್ಯ ಜೀವನಳ್ಳಿಗೆ ಹೋದ. ಮನೆ ನೆಲಸಮವಾಗಿತ್ತು. ನೆಟ್ಟಿದ್ದ ಕವೆಗಳೂ ನಾಪತ್ತೆಯಾಗಿದ್ದವು. ಹೆಂಡತಿ ಮಕ್ಕಳ ಸುಳಿವಿರಲಿಲ್ಲ. ಅಕ್ಕಪಕ್ಕದವರನ್ನ ಕೇಳಿದಾಗ ಕರುಳು ಕತ್ತರಿಸುವ ಸುದ್ದಿ ತಿಳಿದುಬಂತು. ಮನುಗನಹಳ್ಳಿ ವೆಂಕಟಗಿರಿಗೌಡ ಮತ್ತು ಕರಿಮುದ್ದನಹಳ್ಳಿ ಹುಳಕಯ್ಯನ ಪುಟ್ಟೇಗೌಡ, ಅಂಕಯ್ಯನ ಸಿದ್ದೇಗೌಡನಾಡ ಹೊನ್ನೇಗೌಡ ಹಾಗು ಕೆಲವರು ಸೇರಿ ರಾಮಯ್ಯನ ಗದ್ದೆ ತೆವರಿ ಕಡಿದು ಮನೆಯೊಳಕ್ಕೆ ನೀರು ಬಿಟ್ಟರು. ಹೆಂಡತಿಮಕ್ಕಳನ್ನು ಹೊರಗಟ್ಟಿದರು. ಮನೆಯ ಸಾಮಾನು ಸರಂಜಾಮುಗಳನ್ನೆಲ್ಲಾ ದೋಚಿದರು. ಮನೆಯನ್ನ ನೆಲಸಮ ಮಾಡಿದರು. ಕೇವಲ ಐದಾರು ವಕ್ಕಲು ದಲಿತರಿರುವ ಆ ಊರಲ್ಲಿ ಈ ಹೀನ ಕೆಲಸ ತಡೆಯಲು ಯಾರಿಗೂ ಸಾಧ್ಯವಾಗಲಿಲ್ಲ.

**ತೋರಣ ಕಟ್ತೀವಿ**

ಇಷ್ಟೊಂದು ಕೆಲಸವೆಲ್ಲ ರಾಮಯ್ಯ ಇಲ್ಲದಿದ್ದಾಗ ನಡೆದುಹೋಗಿತ್ತು. ಹೆಂಡತಿ ಮಕ್ಕಳು ಏನಾದರು ಸತ್ತರೆ ಬದುಕಿ ಓಡಿದರೆ ಕಂಡವರಿಲ್ಲ. ಸುದ್ದಿ ತಿಳಿಸುವರೂ ಇಲ್ಲ. ರಾಮಯ್ಯ ಮತ್ತೆ ಪೋಲೀಸ್ ಠಾಣೆ ಹತ್ತಿದ. ರಾಜಕಾರಣಿಗಳ ಹಿಡಿದ. ಸಮಾಜವಾದ ಹೇಳುವ ಕರ್ನಾಟಕದ ಮುಖ್ಯಮಂತ್ರಿ ಶ್ರೀ ದೇವರಾಜಅರಸೂ ಅವರಿಗೂ ಬರೆದುಕೊಂಡ. ಯಾರಿಂದಲೂ ಏನೂ ಪ್ರತಿಕ್ರಿಯೆ ಬರಲಿಲ್ಲ. ರಾಮಯ್ಯ ಇಷ್ಟೆಲ್ಲ ಕೆಲಸ ಮಾಡುತ್ತಿದ್ದಾನೆ ಅಂತ ತಿಳಿದ ವೆಂಕಟಗಿರಿ ಗೌಡ ಮತ್ತು ಅವನ ಗೆಳೆಯರು ಮತ್ತೆ ರಾಮಯ್ಯನಿಗೆ ಹೆದರಿಕೆ ಹಾಕಿದರು. ಗದ್ದೆಗೆ ತೆವರಿ ಹಾಕಲು ಬಂದರು. ರಾಮಯ್ಯ ತಡೆಯಲು ಹೋದ. ' ಸಿಗ್ದು ತ್ವಾರ್ಣ ಕಟ್ತೀವಿ ' " ಬೆಂಕಿಗ್ಹಾಕಿ ಸುಟ್ಬುಡ್ತೀವಿ '' ಎಂದು ನೆಟ್ಟಿದ್ದ ತೆಂಗಿನ ಗಿಡ ಬಾಳೇಗಿಡಗಳನ್ನೆಲ್ಲಾ ಕಿತ್ತೆಸೆದರು. ರಾಮಯ್ಯ ದಿಕ್ಕುಕಾಣದೆ ನಿಂತ. ಯಾರ ಸಹಾಯವೂ ದೊರೆಯದೆ ನಿರಾಶ್ರಿತನಾದ. ಹೊಟ್ಟೆಪಾಡಿಗಾಗಿ ಚಪ್ಪಲಿ ಹೊಲೆಯ ತೊಡಗಿದ.

**ಹೊಸ ಆಟ**

ಈ ನಡುವೆ ವೆಂಕಟಗಿರಿಗೌಡ ರಾಮಯ್ಯನಿಗೆ ಸೇರಿದ 7ನೇ ಸರ್ವೆ ನಂಬರ್ ಜಮೀನು ಹರಿಜನರಾದ ಅಮಾಸೆ, ರಾಮ ಮತ್ತು ಪಳನಿ ಎಂಬುವರಿಗೆ ಸಾಗುವಳಿಯಾಗಿ ಬಂದಿದೆ ಅದನ್ನು ನಾನು ಕ್ರಯಕ್ಕೆ ತೆಗೆದುಕೊಂಡಿರುವೆ ಅಂತ ಹೊಸಆಟ ಹೂಡಿದನು. ಇದು ನಿಜವಲ್ಲ ಅಂತ ಊರಿನ ಎಲ್ಲರಿಗೂ ತಿಳಿದಿದ್ದರೂ ಸಂಶಯ ಇದ್ದೇ ಇದೆ. ತನ್ನ ಮೇಲೆ ಇಷ್ಟೆಲ್ಲ ದೌರ್ಜನ್ಯ ದರೋಡೆ ನಡೆಯುತ್ತಿದ್ದರೂ ಯಾವ ರೀತಿಯ ಪ್ರತಿಕ್ರಿಯೆಯನ್ನು ತೋರಿಸದ ವ್ಯವಸ್ಥೆಯ ಬಗ್ಗೆ ರಾಮಯ್ಯನಿಗೆ ಅಪಾರ ಜಿಗುಪ್ಸೆ ಹುಟ್ಟಿದೆ. ನಿಲ್ಲಲು ನೆಲೆ ಇಲ್ಲದೆ ಹೆಂಡತಿ ಮಕ್ಕಳನ್ನು ಕಾಣದೆ ಹೊಟ್ಟೆಗೆ ಹಿಟ್ಟಿಲ್ಲದೆ ಹೆಗಲಲ್ಲೊಂದು ಬ್ಯಾಗನ್ನು ನೇತಾಕಿಕೊಂಡು ರಾಮಯ್ಯ ಜನತಿರುಗುವ ರಸ್ತೆಗಳ ಯಾವುದೋ ಮರದಡಿ ನಾಲ್ಕಾರು ಚರ್ಮದ ಹಳೇ ಎಕ್ಕಡದ ಚೂರು ಇಟ್ಟುಕೊಂಡು ಕೂತಿರುತ್ತಾನೆ. ●

## ಹರಿಜನರು ದೇವಸ್ಥಾನಕ್ಕೆ ಹೋದರೆ ದೋಷವೆ? ಹೋಗುವ ಅಧಿಕಾರವಿಲ್ಲವೆ?

ತಾರೀಖು 16-10-77ರ ಭಾನುವಾರ ರಾತ್ರಿ ಭವ್ಯ ಗೌರಿ ಗಣೇಶನ ಜಾತ್ರೆ ಮುಗುಳುವಳ್ಳಿಯಲ್ಲಿ ನಡೆಯಿತು. ನಾನು ಕೆಲವು ಸ್ನೇಹಿತರೊಂದಿಗೆ ಹೋಗಿದ್ದೆನು. ಜಾತ್ರೆ ಜನ ಸಂದಣಿಯಿಂದ ಕೂಡಿತ್ತು. ನಾನು ಗೆಳೆಯರೊಂದಿಗೆ ದೇವಸ್ಥಾನದ ಒಳಗೆ ಹೋದೆ. ಆದರೆ ಹೊರಗೆ ಬರುವಷ್ಟರಲ್ಲಿಯೇ ಊರಿನ ಒಬ್ಬ "ಓ ಹರಿಜನರು ದೇವಸ್ಥಾನದ ಒಳಗೆ ಬರಬಾರದು" ಎಂದ. ನಾನು ಏಕೆ ಬರಬಾರದು ಎಂದು ಪ್ರಶ್ನಿಸಿದಾಗ ಅವನು ಕೂಡಲೇ ತನ್ನ ಮಾತಿನ ವೈಖರಿಯನ್ನು ಬದಲಾಯಿಸಿ " ನಿಮ್ಮ ಜನರೇ ದೇವಸ್ಥಾನದ ಒಳಗೆ ಬರಬಾರದು. ಬಂದರೆ ನಿಮಗೆ ತೊಂದರೆ ಮತ್ತು ದೋಷವಾಗುತ್ತದೆ " ಎಂದರು. ಅದಕ್ಕೆ ಪ್ರತ್ಯುತ್ತರವಾಗಿ ನಾನು ಮತ್ತು ಸ್ನೇಹಿತರು "ದೋಷ ಅನ್ನೋದು ನಮ್ಮೆಲ್ಲರಿಗೂ ಗೊತ್ತಿದ್ದೇ ದೇವಸ್ಥಾನದ ಒಳಗೆ ಬಂದದ್ದು . ಅಷ್ಟರಲ್ಲಿ ಹಿಂದೆ ನಿಂತ ಇನ್ನೊಬ್ಬನು "ಯಾರ‍್ಲ ಹರಿಜನರಿಗೆ ದೇವಸ್ಥಾನಕ್ಕೆ ಪ್ರವೇಶಿಸಲು ಅಧಿಕಾರ ಕೊಟ್ಟವರು " ಎಂದು ಕಟುವಾಗಿ ಟೀಕಿಸಿದನು. ನಂತರ ಗುಂಪುಸೇರಿ ಗಲಾಟೆ ಪ್ರಾರಂಭವಾಯಿತು. ಅಂದರೆ ನನಗೆ ಅನ್ನಿಸಿತು 'ಹರಿಜನರು ಮನುಷ್ಯರಲ್ಲವಾ ?' ಯಾಕೆ ಈ ಜನರು ಹರಿಜನರನ್ನ ಕಂಡರೆ ಈ ರೀತಿ ಕಾಣುತ್ತಾರೆ ? ಹರಿಜನರನ್ನು ದೇವಸ್ಥಾನದ ಒಳಗೆ ಸೇರಿಸಬಾರದೆಂದು ದೇವರೇನು ಹೇಳಿದೆಯ ?" ಹಾಗಾದರೆ ಎಲ್ಲಾ ಕೆಲಸಕ್ಕೆ ಈ ಹರಿಜನರನ್ನು (ಉಪಯೋಗಿಸಿಕೊಂಡ) ಅಂದರೆ ಗುಡಿಕಟ್ಟಕೆ, ಕಸಗುಡಿಸಕ್ಕೆ, ಲೈಟ್ ಹಿಡಿಯಾಕೆ, ವಾದ್ಯಕ್ಕೆ ಮುಂತಾದವುಗಳಿಗೆ ಉಪಯೋಗಿಸಿಕೋಳ್ಳುತ್ತಾರೆ. ದೇವಸ್ಥಾನದ ಒಳಗೆ ಹೋಗಲು ಅಧಿಕಾರವಿಲ್ಲವೇ ? ಮನುಷ್ಯರನ್ನು ಮನುಷ್ಯರು ಶೋಷಣೆ ಮಾಡುವ ಮಾನವೀಯತೆಯಿಲ್ಲದ ನಡವಳಿಕೆಯನ್ನ ಬೆಳೆಸಿಕೊಂಡಿರುವ ಈ ಜನತೆಯ ಬಗ್ಗೆ ಮಾತನಾಡಲು ನನಗೆ ಹೇಸಿಗೆಯಾಗುತ್ತದೆ. ಇದೇ ರೀತಿ ಶೋಷಣೆಗಳು ಮುಂದುವರೆದರೆ ಹರಿಜನರು ಹಿಂದೂ ಧರ್ಮವನ್ನ ಬಿಡುವುದರಲ್ಲಿ ಸಂಶಯವಿಲ್ಲ. ಮಾನವೀಯತೆಗಾಗಿ ಸಮಾನತೆಗಾಗಿ ಹರಿಜನರು ಹೋರಾಟ ಮಾಡುವುದು ಅನಿವಾರ್ಯ. ●

ಹೆಚ್. ಸಿ. ರಾಜಣ್ಣ

## ಹಲ್ಲೆ ನಡೆಸಿ ಹಸುಗಳು ವಶಕ್ಕೆ

ಹೆಗ್ಗಡದೇವನಕೋಟೆ ತಾಲೂಕಿನ ಅಣ್ಣೂರು ಗ್ರಾಮದಲ್ಲಿ ಲಿಂಗಾಯಿತರ ದೊಡ್ಡ ಕೂಸಪ್ಪನು ಹರಿಜನ ಕುಳ್ಳಯ್ಯನ ಮನೆ ನುಗ್ಗಿ ಆತನ ನಾಲ್ಕು ಹಸುಗಳನ್ನ ಹಿಡಿದುಕೊಂಡು ಹೋಗಿದ್ದು, ತಡೆಯಲು ಬಂದ ಆತನನ್ನು ಹೊಡೆದು ಆವನ ಹೆಂಡತಿಮಕ್ಕಳನ್ನೂ ಬೀದಿಗೆಳೆದು ಅವಮಾನಿಸಿರುವನು.

ಈ ಘಟನೆಗೆ ಹಿನ್ನೆಲೆ ಹೀಗಿದೆ :

ಸುಮಾರು ಹತ್ತು ವರ್ಷಗಳ ಹಿಂದೆ ಹರಿಜನ ಕುಳ್ಳಯ್ಯನು ತನ್ನ ½ ಎಕರೆ ಜಮೀನನ್ನು ಲಿಂಗಾಯಿತರ ಕೂಸಪ್ಪನಿಗೆ 1000 ರೂ. ಗಳಿಗೆ ಭೋಗ್ಯ ಮಾಡಿ ಕೊಟ್ಟಿದ್ದರೂ ಒಂದು ಒಪ್ಪಂದಕ್ಕೆ ಬಂದು ತಾನೇ ಆಜಮೀನನ್ನು ಉಳುಮೆ ಮಾಡುತ್ತಿದ್ದು ತಾನು ಇಸಿಕೊಂಡಿದ್ದ 1000 ರೂ. ಗಳಿಗೆ ಬಡ್ಡಿಯೆಂದು ವರ್ಷಕ್ಕೆ 5 ಪಲ್ಲ ದಿನಸಿಯನ್ನು ಕೊಡುತ್ತಾ ಬಂದಿದ್ದ. ಇದು ಹತ್ತು ವರ್ಷಗಳಿಂದಲೂ ಹೀಗೆ ನಡೆದಿತ್ತು. ಈ ಸಲ ಬೆಳೆಯಾಗದ ಕಾರಣ (ಮತ್ತು ಋಣ ವಿಮೋಚನಾ ಕಾನೂನಿನ್ವಯ ಸಾಲ ಮಾಫಿಯಾಗಿದೆಯೆಂದೂ, ಈ ಮೊದಲೇ ಡಿಕ್ಲರೇಷನ್ ಸಹ ಕೊಟ್ಟಿದುದರಿಂದ) ಕುಳ್ಳಯ್ಯನು ದೊಡ್ಡ ಕೂಸಪ್ಪನಿಗೆ ದಿನಸಿ ಬಡ್ಡಿಯನ್ನು ಕೊಡಲಿಲ್ಲ. ಇದರಿಂದ ಕೋಪಗೊಂಡ ದೊಡ್ಡಕೂಸಪ್ಪ 14-10-77 ರಂದು ಕುಳ್ಳಯ್ಯನ ಗುಡಿಸಿಲಿನ ಹತ್ತಿರ ಬಂದು ಹೀನಾ ಮಾನ ಬೈಯುತ್ತಾ ತನ್ನ ಹಣ ವಾಪಸ್ಸು ಕೊಡುವವರೆಗೂ ಬಿಡುವುದಿಲ್ಲವೆಂದು ಕುಳ್ಳಯ್ಯನ ಹಸುಗಳನ್ನು ಹಿಡಿದುಕೊಂಡು ಹೋಗುತ್ತಿದ್ದಾಗ ತಡೆದ ಕುಳ್ಳಯ್ಯನನ್ನು ಚೆನ್ನಾಗಿ ಹೊಡೆದು ಆತನ ಹೆಂಡತಿ ಮಕ್ಕಳನ್ನೂ ಅವಮಾನಪಡಿಸಿ ಹಸುಗಳನ್ನು ಹಿಡಿದುಕೊಂಡು ಹೋಗಿರುವನು.

ಹಲ್ಲೆಗೊಳಗಾದ ಕುಳ್ಳಯ್ಯನು ಪಕ್ಕದ ಭೀಮನ ಹಳ್ಳಿಯ ಅಂಬೇಡ್ಕರ್ ಯುವಕ ಸಂಘಕ್ಕೆ ತಿಳಿಸಿ ಅಲ್ಲಿಯ ಸದಸ್ಯರ ಜೊತೆಯಾಗಿ ಸಂಬಂಧಪಟ್ಟ ಅಧಿಕಾರಿಗಳಿಗೆ ದೂರು ಕೊಟ್ಟಿದ್ದರೂ ಸಹ ಇದುವರೆಗೂ ಯಾವ ಕ್ರಮವನ್ನೂ ತೆಗೆದುಕೊಂಡಿಲ್ಲ. ಹಸುಗಳು ಲಿಂಗಾಯತರ ಕೂಸಪ್ಪನ ವಶದಲ್ಲಿಯೇ ಇದ್ದು ಕುಳ್ಳಯ್ಯನು ಏನೂ ಮಾಡಲು ತೋಚದೆ ಅಸಹಾಯಕನಾಗಿದ್ದಾನೆ ●

# ಮಧ್ಯಪ್ರದೇಶದಲ್ಲಿ ಹರಿಜನರ ಕೊಲೆ ಸುಲಿಗೆ ಇತ್ಯಾದಿ;

ಕಳೆದ ಆಗಸ್ಟ್ ತಿಂಗಳಲ್ಲಿ ಮಧ್ಯಪ್ರದೇಶದ ರತ್ಲಾಂ ಜಿಲ್ಲೆಯ ಕನಾಡಿಯ ಹಳ್ಳಿಯಲ್ಲಿ ಶಸ್ತ್ರ ಸಜ್ಜಿತ ಜಮೀನ್ದಾರರು ತಮ್ಮ ದನಗಳನ್ನು ಬೆಳೆದು ನಿಂತ ಹರಿಜನರ ಜಮೀನಿನಲ್ಲಿ ಮೇಯಲು ನುಗ್ಗಿಸಿದರು. ಹರಿಜನರು ಇದನ್ನು ಪ್ರತಿಭಟಿಸಿದಾಗ ಜಮೀನ್ದಾರರ ಗುಂಪು ಅವರ ಮೇಲೆ ಧಾಳಿ ಮಾಡಿ ಕೆಲವೇ ನಿಮಿಷಗಳಲ್ಲಿ 4 ಜನರನ್ನು ಕೊಂದು ಹಾಕಿತು ಮತ್ತು 17 ಜನರನ್ನು ತೀವ್ರವಾಗಿ ಗಾಯಗೊಳಿಸಿತು. 20 ವರ್ಷದ ಹುಡುಗಿಯೊಬ್ಬಳು ತನ್ನ ತಮ್ಮನನ್ನು ರಕ್ಷಿಸುವ ವಿಫಲ ಪ್ರಯತ್ನ ಮಾಡಿದಾಗ ಆಕೆಯನ್ನು ಲಾಠಿಯಿಂದ ಥಳಿಸಿ ಬೆತ್ತಲೆ ಮಾಡಲಾಯಿತು.

ಈ ಕನಾಡಿಯಾ ಹತ್ಯಾಕಾಂಡ ಮಧ್ಯಪ್ರದೇಶದಲ್ಲಿ ಒಂದು ಹೊಸಘಟನೆಯೇನಲ್ಲ. ಜಮೀನ್ದಾರರ ದಬ್ಬಾಳಿಕೆಯಿಂದಾಗಿ ಭೂಸುಧಾರಣಾಕಾನೂನು ಮತ್ತು ಜೀತಪದ್ಧತಿ ರದ್ಧತಿ ಕಾನೂನುಗಳನ್ನು ಅಣಕಿಸುವ ತರ ಇಲ್ಲಿ ಹರಿಜನರ ಕೊಲೆ ಸುಲಿಗೆ ಗೋಳು ಎಡಬಿಡದೆ ನಡೆಯುತ್ತಲೆ ಇದೆ. ರತ್ಲಾಂ ಜಿಲ್ಲೆ ಮತ್ತು ಇನ್ನಿತರ ಕಡೆಗಳಲ್ಲಿ ಇರುವ ನಿಜವಾದ ಪರಿಸ್ಥಿತಿಗೆ ಕನಾಡಿಯಾದ ಕಥೆ ಒಂದು ಸ್ಪಷ್ಟ ನಿದರ್ಶನ:

ಕಾರ್ಮಿಕ ಇಲಾಖೆಯ ಅಧಿಕಾರಿಯೊಬ್ಬ ಜೀತ ಪದ್ಧತಿ ರದ್ದಿಯಾತಿ ಕಾನೂನಿನ ಒಳ್ಳೆಯ ಪರಿಣಾಮಗಳನ್ನು ಕುರಿತು ವಿವರಿಸುತ್ತಿದ್ದಾಗ ಜೀತಗಾರನೊಬ್ಬ ಮೇಲಕ್ಕೆದ್ದು "ಸ್ವಾಮಿ... ದಿಲ್ಲಿಯ ಸರ್ಕಾರ ಈ ಕಾನೂನನ್ನು ಒಪ್ಪಿಕೊಂಡಿದೆ. ಆದರೆ ನಮ್ಮ ಊರಿನ "ಸರ್ಕಾರ" ಈ ಕಾನೂನನ್ನ ಒಪ್ಪಿಕೊಂಡಿಲ್ಲವಲ್ಲ!" ಎಂದ. ಆಶ್ಚರ್ಯಗೊಂಡ ಅಧಿಕಾರಿ "ನಿಮ್ಮೂರಿನ ಸರ್ಕಾರ ಯಾವುದು?" ಎಂದು ಕೇಳಿದ್ದಕ್ಕೆ "ಫೂಲ್ ಸಿಂಗ್, ರೂಪ್ ಸಿಂಗ್" ಎಂದು ಜೀತಗಾರ ಉತ್ತರಿಸಿದ.

ಕನಾಡಿಯ ಹಳ್ಳಿಗೆ ಒಂದು ಸಣ್ಣ ಎತ್ತಿನ ಗಾಡಿಯ ರಸ್ತೆಯೂ ಇಲ್ಲ. ಇಲ್ಲಿಗೆ ಹೋಗಬೇಕಾದರೆ ತುರಿಯಾ ರೈಲು ನಿಲ್ದಾಣದಲ್ಲಿ ಇಳಿದು 6 ಕಿ.ಮೀ. ದೂರ ಕಲ್ಲು ಮುಳ್ಳಿನ ಮೇಲೆ ನಡೆಯಬೇಕು. ಕ್ಷಿಪ್ರಾ ಮತ್ತು ಲೂನಿ ನದಿಗಳು ಕೂಡುವ ಸ್ಥಳದಲ್ಲಿ ಇರುವ ಕನಾಡಿಯ ಹಳ್ಳಿಯ ಜನ ಸಂಖ್ಯೆ 321. ಇರುವ 53 ಕುಟುಂಬಗಳಲ್ಲಿ 3 ಬ್ರಾಹ್ಮಣ, 18 ಕುರುಬ, 5 ಸೂತರ್, 1 ಹಜಾಮ, 7 ಬಗಾರಿ ಮತ್ತು 14 ಹರಿಜನ-ಇತ್ಯಾದಿ ಜಾತಿಗಳಿಗೆ ಸೇರಿದುವು ಈ ಪುಟ್ಟ ಹಳ್ಳಿ ಇಬ್ಭಾಗವಾಗಿ ಒಡೆದುಕೊಂಡಿದ್ದು ಒಂದು ಭಾಗದಲ್ಲಿ ಪೂರ್ತಿ ಹರಿಜನರು ವಾಸಿಸುತ್ತಾರೆ. ಮೇಲ್ಜಾತಿಯವರ ಮನೆಗಳೆಲ್ಲ ಒಂದು ದಿಬ್ಬದ ಮೇಲೆ ಇದ್ದು, ಪ್ರವಾಹ ಬಂದರೆ ಕೊಚ್ಚಿ ಹೋಗುವ ಹರಿಜನರ ಗುಡಿಸಲುಗಳಿಗೆ ಎದುರು ಮುಖ ಮಾಡಿವೆ. ಕನಾಡಿಯಾದ ಬಹುಪಾಲು ಹರಿಜನರು ಅನಾಥರಲ್ಲದಿದ್ದರೂ, ಬಡ ರೈತರು. ಇವರಿಗೆ 1 ರಿಂದ 4 ಎಕರೆ ತನಕ ಜಮೀನು ಇದೆ ನಿಜ. ಆದರೆ ನೀರಾವರಿ ಇಲ್ಲದ ಈ ಜಮೀನಿನಲ್ಲಿ ಬರುವ ಬೆಳೆ ಇವರ ಅರೆ ಹೊಟ್ಟೆಯನ್ನ ತುಂಬಿಸುವುದಿಲ್ಲ ಇದರಿಂದಾಗಿ ಬಡ ರೈತರು ಜಮೀನ್ದಾರರುಗಳ ಜಮೀನಿನಲ್ಲಿ ಕೂಲಿಕಾರರಾಗಿ ದುಡಿಯಬೇಕಾಗಿದೆ. ಇಲ್ಲಿನ ಜಮೀನ್ದಾರರುಗಳು [illegible] ಎಕರೆಗಳ ತನಕ ಜಮೀನ ಹೊಂದಿ ಸರ್ಕಾರದ ಭೂಮಿತಿಕಾನೂನನ್ನ ಗಾಳಿಗೆ ತೂರಿದ್ದಾರೆ. ಸಾಮಾನ್ಯವಾಗಿ ಗಂಡಸರಿಗೆ 3 ರೂಪಾಯಿ ಹೆಂಗಸರಿಗೆ 2 ರೂಪಾಯಿ ಕೂಲಿ ಹುಟ್ಟುವ ಕನಾಡಿಯಾದಲ್ಲಿ ಯಾವ ಹರಿಜನ ಕೂಲಿಕಾರನ ಕಿವಿಗೂ ಸರ್ಕಾರದ ಕನಿಷ್ಟ ಕೂಲಿ ಕಾನೂನು ಕೇಳಿಯೇ ಇಲ್ಲ. ಸಿಕ್ಕುವ ಕೆಲಸವಾದರೂ ದಿನಾ ಸಿಕ್ಕುವುದಿಲ್ಲ ಎನ್ನುವುದು ಇವರ ಆತಂಕ.

ಕನಾಡಿಯಾದಲ್ಲಿ ಜೀತಕ್ಕೆ "ಹಲಿ" ಎಂದು ಹೆಸರು. ಇಲ್ಲಿನ "ಫುಲ್ ಸಿಂಗ್ ಮತ್ತು ರೂಪ್ ಸಿಂಗ್‌ರ ಸರ್ಕಾರ"ದ ಕರುಣೆಯಿಂದಾಗಿ ಜೀತ ಇನ್ನೂ ಜಾರಿಯಲ್ಲಿದೆ. ತುರ್ತು ಪರಿಸ್ಥಿತಿಯಲ್ಲಿ ಕೆಲವರು ಜೀತದಿಂದ ಬಿಡುಗಡೆ ಹೊಂದಿದರೆ, ಬಹಳಷ್ಟು ಜನರು ಜೀತಗಾರರಾಗೇ ಉಳಿದರು, ಬಿಡುಗಡೆ ಹೊಂದಿದವರೂ ಬೇರೆಲ್ಲೂ ಗತಿ ಕಾಣದಾದಾಗ ತಮ್ಮ ಹಿಂದಿನ ಮಾಲೀಕರಿಂದ ಹಣ ಪಡೆದು ಮತ್ತೆ ಜೀತಗಾರರಾದರು. ದಿನಕ್ಕೆ 14 ರಿಂದ 18 ಗಂಟೆ ಕಾಲ ದುಡಿಯುವ ಇವರನ್ನು ಊರಲ್ಲಿ ಭೇಟಿ ಮಾಡುವುದೇ ಅಪರೂಪ.

ಇಲ್ಲಿನ ಜೀತ ಪದ್ಧತಿ ಇಂಡಿಯಾದ ಎಲ್ಲಾ ಕಡೆ ಇರುವಂತೆಯೇ ಇದೆ ಜೀತಗಾರರಿಗೆ ಮುಂಗಡವಾಗಿ ಕೊಡುವ ಹಣ 200 ರೂ. ನಿಂದ 2000 ರೂ. ವರೆಗೆ ಮತ್ತು ದನ ಕಾಯುವ ಹುಡುಗರಿಗೆ 30ರೂ. ನಿಂದ 100 ರೂ ವರೆಗೆ. ಸಾಲ ಜಾಸ್ತಿ ಕೊಟ್ಟಂತೇ ಕಮ್ಮಿಕೂಲಿ ನಿರ್ಧರಿಸಲಾಗುತ್ತದೆ. ವರ್ಷಕ್ಕೆ 100 ರಿಂದ 150 ರೂಪಾಯಿ ಮತ್ತು ಊಟ—ಇದು ವರ್ಷದ ಕೂಲಿ.

1975ರಲ್ಲಿ 4 ಜನ ಹರಿಜನರಿಗೆ ಮತ್ತು ಒಬ್ಬ ಹರಿಜನೇತರನಿಗೆ ಹೆಚ್ಚುವರಿ ಜಮೀನನ್ನು ಮಂಜೂರು ಮಾಡದಾಗ ಗಲಭೆ ಪ್ರಾರಂಭವಾಯಿತು. ಈ ನ[illegible] ಜನ [illegible] ಗ್ರಾಮಕ್ಕೆ ಸೇರಿದವರು. ಇವರಲ್ಲಿ ಒಬ್ಬ "ಭೂವಿತರಣಾ ಜನ ಸಮಿತಿ"ಗೆ ಸೇರಿದ ಕಾಂಗ್ರೆಸ್ ಸದಸ್ಯ ಮತ್ತು ಇನ್ನೊಬ್ಬ ಅಲೋತ್‌ನ ಮುನಿಸಿಪಾಲಿಟಿಯಲ್ಲಿ ಒಳ್ಳೆಯ ಉದ್ಯೋಗಹಿಡಿದಿರುವವ. ಹೀಗೆ ಹರಿಜನರಿಗೆ ಅದರಲ್ಲೂ ಬೇರೆ ಊರಿನವರಿಗೆ ಭೂಮಿ ಮಂಜೂರು ಮಾಡಿದುದರ ವಿರುದ್ಧ ಕನಾಡಿಯಾದ ಹರಿಜನೇತರರು ಸಿಟ್ಟಿಗೆದ್ದು, ಅದನ್ನು ರದ್ದು ಮಾಡಬೇಕೆಂದು ಅಧಿಕಾರಿಗಳಿಗೆ ಹಲವಾರು ಮನವಿ ಸಲ್ಲಿಸಿದರು. ಹರಿಜನರಿಗೆ ಗೋಮಾಳದ ಜಮೀನು ಹಂಚಿದ್ದುದು ನಿಜ. ಆದರೆ ಕಾನೂನಿನ ಪ್ರಕಾರ ಕೃಷಿಯೋಗ್ಯ ಜಮೀನಿನ $\frac{1}{10}$ ಭಾಗವನ್ನು ಗೋಮಾಳಕ್ಕೆ ಬಿಟ್ಟು ಮಿಕ್ಕ ಹೆಚ್ಚುವರಿ ಭಾಗವನ್ನು ಮಾತ್ರವೇ ಹರಿಜನರಿಗೆ ಮಂಜೂರು ಮಾಡಲಾಗಿತ್ತು. ಆಂದರೆ ಮೇಲ್ಜಾತಿಯವರ ಸಿಟ್ಟಿಗೆ ನಿಜವಾದ ಕಾರಣ ಜಮೀನು ಹಂಚಿಕೆ ಇದೇ ರೀತಿ ಮುಂದುವರಿದರೆ ಹರಿಜನರ ಸಾಮಾಜಿಕ ಅಂತಸ್ತು ಹೆಚ್ಚಿ ಅವರ ಆರ್ಥಿಕ ಸ್ಥಿತಿ ಉತ್ತಮವಾಗಿ ಬಿಟ್ಟರೆ ತಮಗೆ ಸಿಗುವ ಅಗ್ಗದ ಕೂಲಿ ಎಲ್ಲಿ ತಪ್ಪುವುದೊ ಎಂಬುದೇ ಆಗಿತ್ತು.

ಈ ಮಧ್ಯೆ, ಲೋಕಸಭೆ ಚುನಾವಣೆ ಬಂತು. ಹರಿಜನರು ಕಾಂಗ್ರೆಸ್ಸಿಗೆ ಓಟು ಹಾಕಿದರು ವಿಧಾನಸಭೆ ಚುನಾವಣೆ ಬಂತು. ಹರಿಜನರು ಅದರಲ್ಲೂ ಕಾಂಗ್ರೆಸ್ಸಿಗೇ ಓಟು ಹಾಕಿದರು. ಯಾಕೆ ಅಂತ ಇವರನ್ನು ಕೇಳಿದರೆ "ಮೊದಲಿಂದಲೂ ನಾವು ಕಾಂಗ್ರೆಸ್ಸಿಗೇ ಹಾಕಿದ್ದೇವೆ. ಈಗ ಹೆಂಗೆ ತಪ್ಪಿಸುವುದು?" ಎಂದು ಉತ್ತರಿಸಿದರು. ಇದರಿಂದ ಹರಿಜನರ ಮತ್ತು ಹರಿಜನೇತರರ ಮಧ್ಯೆ ದ್ವೇಷ ಬೆಳೆಯುತ್ತಾ ಬಂತು. ಇಷ್ಟರಲ್ಲಿ ಹೊಸದಾಗಿ ಅಧಿಕಾರಕ್ಕೆ ಬಂದ ಜನತಾ ಸರ್ಕಾರ "ರಾಜ್ಯದಲ್ಲಿ ಕಾಂಗ್ರೆಸ್ ನೇತೃತ್ವದ ಜನ ಸಮಿತಿಗಳು ಮಾಡಿರುವ ಭೂ ಹಂಚಿಕೆ ದೋಷಪೂರಿತವಾದದು. ಆದ್ದರಿಂದ ನಾವು ಅದನ್ನು ಸರಿಪಡಿಸುತ್ತೇವೆ" ಎಂದು ಹೇಳಿತು ಇದರಿಂದ ಉತ್ಸಾಹಿತರಾದ ಕನಾಡಿಯಾದ ಜಮೀನ್ದಾರರುಗಳು ದೋಷವನ್ನು ಸರಿಪಡಿಸಲು ತಾವೇ ನಿರ್ಧರಿಸಿದರು.

ಜುಲೈ ತಿಂಗಳ ಮೊದಲ ವಾರದಲ್ಲಿ ಕನಾಡಿಯಾದ ಹರಿಜನ ಮತ್ತು ಹರಿಜನೇತರರ ಒಂದು ಸಭೆ ಸೇರಿಸಲಾಯಿತು. ಸಭೆಯು "ಹೊರ ಊರಿನವರ ಜಮೀನಿನಲ್ಲಿ ಕೆಲಸ ಮಾಡಲು ಕನಾಡಿಯಾದ ಯಾವುದೇ ಕೂಲಿಕಾರನೂ ಹೋಗ ಕೂಡದು" ಎಂದು ನಿರ್ಧರಿಸಿತು. ಆದರೆ ಓಂಕಾರ್ ಎನ್ನುವ ಊರಿನ ಹರಿಜನರ ನಾಯಕ ಈ ನಿರ್ಧಾರ

---

## ಹಾಸ್ಟೆಲಿನಲ್ಲಿ ದಬ್ಬಾಳಿಕೆ

[3ನೇ ಪುಟದಿಂದ]

ರವರು ಅಣಾರಿನ ಸೊಸೈಟಿ ಮೀಟಿಂಗ್‌ಗೆ ಬಂದಿದ್ದಾಗ ಹಾಸ್ಟೆಲು ವಿದ್ಯಾರ್ಥಿಗಳನ್ನು ಸೊಸೈಟಿಯ ಹತ್ತಿರವೇ ಕರೆಸಿ "ಜಿಲ್ಲಾಧಿಕಾರಿಗಳ ಹತ್ತಿರ ಯಾಕೋ ಹೋದಿರಿ" ಎಂದು ಬೈದು ರೂಲು ದೊಣ್ಣೆಯಿಂದ ಹೊಡೆದಿದ್ದಾರೆ. ರಾಜು ಎಂಬ 10 ವರ್ಷದ ಹುಡುಗನಿಗೆ ಬಾಸುಂಡೆ ಬರುವಂತೆ ಬೆನ್ನಿಗೆ ಹೊಡೆದಿದ್ದು ಹೊಡೆತ ಬಿದ್ದ ಜಾಗದಲ್ಲಿ ಕಪ್ಪಗೆ ಗುರುತು ಉಳಿದಿದ್ದು ಶೇಷಪ್ಪ ಮತ್ತು ಮುಳ್ಳಯ್ಯ ಎಂಬುವರಿಗೆ ತೊಡೆ ಸೊಂಟಕ್ಕೆ ಗಂಟು ಬರುವಂತೆ ಹೊಡೆದಿದ್ದಾರೆ. ಇದಲ್ಲದೆ ಸೊಸೈಟಿಯ ನಂಜೇಗೌಡ ಮತ್ತು ಪದ್ಮೇಗೌಡರು ಸಹ ಹೊಡೆದಿದ್ದು ಇನ್ನೊಂದಾದರೂ ಈ ರೀತಿ ದೂರು ಕೊಟ್ಟರೆ ಚಾಕು ಹಾಕುತ್ತೇವೆಂದು ಪ್ರಾಣ ಭಯ ಹುಟ್ಟಿಸಿದ್ದಾರೆ.

ಸರ್ಕಾರ ವಿದ್ಯಾರ್ಥಿಗಳಿಗೆ ಕೊಡುತ್ತಿರುವ ಸವಲತ್ತುಗಳನ್ನೆಲ್ಲ ತಾವೇ ನುಂಗುತ್ತಿರುವ ಹಾಸ್ಟೆಲ್ ವಾರ್ಡನ್‌ರ ಜೊತೆ ಬಿ.ಡಿ.ಓ. ಸಹ ಸೇರಿಕೊಂಡು ತಮ್ಮನ್ನೇ ಹೊಡೆದಿದ್ದು ಊರಿನ ಸೊಸೈಟಿಯ ಸವರ್ಣೀಯ ಮುಖಂಡರುಗಳೂ ಹೊಡೆದು ಪ್ರಾಣ ಭಯ ಹುಟ್ಟಿಸಿರುವುದು ಇವೆಲ್ಲದರಿಂದ-ಇಲ್ಲಿನ ವಿದ್ಯಾರ್ಥಿಗಳು ಬಾಯಿ ಮುಚ್ಚಿಕೊಂಡು ಕೊಟ್ಟದ್ದು ತಿಂದುಕೊಂಡಿರಬೇಕಾಗಿದೆ. ಚಿಕ್ಕಮಗಳೂರಿನ ಅಂಬೇಡ್ಕರ್ ಸಂಘದ ಸದಸ್ಯರು ತಾರೀಖು 24-11-77 ರಂದು ಹಾಸ್ಟೆಲ್‌ಗೆ ಭೇಟಿ ಕೊಟ್ಟಾಗ ವಿದ್ಯಾರ್ಥಿಗಳು ತಮಗಾಗಿರುವ ಅನ್ಯಾಯವನ್ನೆಲ್ಲಾ ಹೇಳಿಕೊಂಡು — ಬಟ್ಟೆ ಬಿಚ್ಚಿ ಹೊಡೆದಿರುವ ಗುರುತುಗಳನ್ನು ತೋರಿಸುತ್ತಾ ತಮ್ಮ ನೋವನ್ನೂ ತೋರಿಕೊಂಡರು ●

---

## ಹುಣಸೂರಿನಲ್ಲಿ ದೌರ್ಜನ್ಯಗಳ ವಿರುದ್ಧ ಪ್ರತಿಭಟನೆ

(ವರದಿ: ಹುಣಸೂರು ಪ್ರತಿನಿಧಿಯಿಂದ)

ದಲಿತರ ಮೇಲೆ ನಡೆಯುತ್ತಿರುವ ದೌರ್ಜನ್ಯದ ವಿರುದ್ಧ ಪ್ರತಿಭಟಿಸಿ 22ನೇ ನವಂಬರ್ 1977 ರಂದು ಹುಣಸೂರಿನಲ್ಲಿ "ದಲಿತ ಸಂಘಟನಾ ಸಂಸ್ಥೆ" ಮೆರವಣಿಗೆ ನಡೆಸಿತು. ಸುರಿಯುವ ಮಳೆಯನ್ನು ಲೆಕ್ಕಿಸದೆ ಸುತ್ತ ಮುತ್ತಲ ಹಳ್ಳಿಗಳಿಂದ ದಲಿತ ಬಾಂಧವರು ಬಂದಿದ್ದರು ಚಿಕ್ಕವರು ದೊಡ್ಡವರು ಮುದುಕರು ಹೀಗೆ ಎಲ್ಲಾ ಸೇರಿ ಸುಮಾರು 500 ಮಂದಿಯಷ್ಟಿದ್ದ ಮೆರವಣಿಗೆಯಲ್ಲಿ 'ದಲಿತರ ಮೇಲಿನ ದೌರ್ಜನ್ಯಕ್ಕೆ ಧಿಕ್ಕಾರ' 'ಬೆಲ್ಚಿಯ ನರಮೇಧಕ್ಕೆ ಧಿಕ್ಕಾರ' 'ಕೊಲೆಗಡುಕ ಜಾತಿ ಪದ್ಧತಿಗೆ ಧಿಕ್ಕಾರ' ಬಂಡವಾಳ ಶಾಹಿಗಳಿಗೆ ಧಿಕ್ಕಾರ' ಇತ್ಯಾದಿ ಘೋಷಣೆಗಳನ್ನು ಕೂಗಲಾಗುತ್ತಿತ್ತು. ಅಲ್ಲದೆ ಇಂಥವೇ ಘೋಷಣೆಗಳನ್ನು ಹೊತ್ತ ಚಿತ್ರಪತ್ರಗಳು ಅಲ್ಲಲ್ಲಿ ಎದ್ದು ಕಾಣುತ್ತಿದ್ದವು.

ಹುಣಸೂರು ತಾಲ್ಲೂಕಿನಲ್ಲಿ ನಡೆದಿರುವ ಹಲವಾರು ದೌರ್ಜನ್ಯಗಳನ್ನು ಪಟ್ಟಿಮಾಡಿ ಸರ್ಕಾರಕ್ಕ ಒಪ್ಪಿಸಲಾಗಿದೆ. ಅಲ್ಲದೆ ರತ್ನಪುರಿಯ ವಿಶ್ವಶಾಂತಿ ಶಿಕ್ಷಣ ಸಂಸ್ಥೆಗೆ ದೊರಕಬೇಕಾಗಿರುವ 89 ಎಕರೆ ಜಮೀನನ್ನು ಕೂಡಲೇ ವಶಕ್ಕೆ ಕೊಡಬೇಕೆಂದು ಸಂಸ್ಥೆ ಒತ್ತಾಯಿಸಿದೆ. ಈ ಬಗ್ಗೆ ಕೂಡಲೇ ಕ್ರಮಕೈಗೊಂಡು ನ್ಯಾಯ ದೊರಕಿಸಿ ಕೊಡದಿದ್ದರೆ ಉಗ್ರರೂಪದ ಚಳವಳಿ ಮಾಡಬೇಕಾಗುತ್ತದೆ. ಎಂದು ದ. ಸ. ಸಂಸ್ಥೆ ಸರ್ಕಾರಕ್ಕೆ ಎಚ್ಚರಿಕೆ ನೀಡಿದೆ.

ಬನ್ನಿಬೀದಿಯಿಂದ ಹೊರಟ ಮೆರವಣಿಗೆ ಕೆ. ಜಿ. ರಸ್ತೆ ಮತ್ತು ಸಿಲ್ವರ್ ಜ್ಯೂಬಿಲಿ ರಸ್ತೆ ಮೂಲಕ ಹೋಗಿ ಪುರಭವನದಲ್ಲಿ ಚದುರಿತು. ಆ ಮುಂಚೆ ನೆರೆದಿದ್ದ ದಲಿತರನ್ನು ಉದ್ದೇಶಿಸಿ ಪಳನಿಯಪ್ಪ ಮತ್ತು ಹರಿಜರ ಆನಂದಸ್ವಾಮಿ ಮಾತನಾಡಿದರು. ●

## ಚಿಕ್ಕಮಗಳೂರು ತಾಲೂಕಿನ ಚಿಕ್ಕಕುರುಬರಹಳ್ಳಿಯಲ್ಲಿ

# ಜೀತ ಬಿಟ್ಟಿದ್ದಕ್ಕೆ ಹರಿಜನರ ಮೇಲೆ ಹಲ್ಲೆ

(ವರದಿ: ಎಂ. ಡಿ. ಗಂಗಯ್ಯ)

ಚಿಕ್ಕಮಗಳೂರು ತಾಲೂಕಿನ ಚಿಕ್ಕಕುರುಬರ ಹಳ್ಳಿಯ ಸವರ್ಣೀಯರ ದೃಷ್ಟಿಯಲ್ಲಿ ಹರಿಜನರು ಜೀತವನ್ನು ತ್ಯಜಿಸಿದ್ದೇ ಒಂದು ದೊಡ್ಡ ಅಪರಾಧ. ಈ ಅಪರಾಧಕ್ಕಾಗಿ ಅವರು ಸವರ್ಣೀಯರಿಂದ ಒಂದಿಲ್ಲೊಂದು ಬಗೆಯ ಕಿರುಕುಳವನ್ನು ಅನುಭವಿಸಬೇಕಾಗಿದೆ. ಹೊಸ ಹೊಸ ನೆಪಗಳೊಡನೆ ಹರಿಜನರನು ಹಿಯ್ಯಾಳಿಸುವುದು, ತುಚ್ಛವಾಗಿ ನಡೆಸಿಕೊಳ್ಳುವುದು ಇವನ್ನೆಲ್ಲ ಮಾಡುತ್ತಿದ್ದ ಸವರ್ಣೀಯರು, ಇಷ್ಟೆ ಸಾಲದೆಂಬಂತೆ, ಹರಿಜನರ ಮೇಲೆ ಹಲ್ಲೆ ಕೂಡ ಮಾಡಿದ್ದಾಯಿತು.

ನ. 9ರಂದು ಹಗಲು ಹೊತ್ತಿನಲ್ಲಿ ಇಬ್ಬರು ಸವರ್ಣೀಯರು ಹರಿಜನ ಕಾಲೋನಿಗೆ ನುಗ್ಗಿ "ಹೊಲೆಯ ಸೂಳೆ ಮಕ್ಕಳ, ಮಾದಿಗ, ನನ್ನ ಮಕ್ಕಳ"ಎಂದು ಅವಾಚ್ಯ ಶಬ್ದಗಳಿಂದ ಬೈಯಲಾರಂಭಿಸಿದರು. ತಾಯಿ, ಹೆಂಡತಿ, ಅಕ್ಕ ಮುಂತಾದವರನ್ನು ಹೆಸರಿಸುತ್ತ ಅವರು ಬೈಯಲಾರಂಭಿಸಿದಾಗ ಒಬ್ಬ ಹರಿಜನ ಅವರನ್ನು ಪ್ರತಿಭಟಿಸಿದ. ಅಷ್ಟಕ್ಕೇ ಕೆರಳಿದ ಅವರಿಬ್ಬರು "ಹೊಲೆ ಮಾದಿಗರಿಗೆ ಇಷ್ಟೊಂದು ಧೈರ್ಯ ಬಂತೇ! ತಾಳಿ, ರಾತ್ರಿ ಬಂದು ನಿಮಗೆ ಸರಿಯಾಗಿ ಬುದ್ಧಿ ಕಲಿಸುತ್ತೇವೆ" ಎಂದು ಬೆದರಿಕೆ ಹಾಕಿ ಹೋದರು.

ಇಂತಹ ಬೆದರಿಕೆಯ ಪ್ರಸಂಗಗಳು ಹಿಂದೆ ಎಷ್ಟೋ ನಡೆದಿದ್ದವು. ಆದ್ದರಿಂದ ಹರಿಜನರು ಅವರ ಬೆದರಿಕೆಯನ್ನು ಗಂಭೀರವಾಗಿ ಪರಿಗಣಿಸಲಿಲ್ಲ.

ಅಂದು ಸಂತೆ ಇದ್ದುದರಿಂದ ಅಲ್ಲಿಗೆ ಹೋಗಿದ್ದ ಬಹುತೇಕ ಹರಿಜನರು ರಾತ್ರಿಯಾದರೂ ಇನ್ನೂ ಹಿಂತಿರುಗಿ ಬಂದಿರಲಿಲ್ಲ. ಸುಮಾರು 8 ಗಂಟೆಯ ವೇಳೆಗೆ ಸುಮಾರು 100 ಜನ ಸವರ್ಣೀಯರು ಹರಿಜನರ ಮನೆಗಳ ಮೇಲೆ ದಾಳಿ ಮಾಡಿದರು. ಬೀದಿ ದೀಪಗಳ ಫ್ಯೂಜನ್ನು ಕಿತ್ತುಹಾಕಿ ಕತ್ತಲೆ ಉಂಟುಮಾಡಿ ದೊಣ್ಣೆ, ಮಚ್ಚು, ಕುಡುಗೋಲು ಇವೇ ಮೊದಲಾದ ಆಯುಧಗಳಿಂದ ಹರಿಜನರನ್ನು ಹೊಡೆದರು. ಇದರ ಪರಿಣಾಮವಾಗಿ 8 ಜನರು ಗಾಯಗೊಂಡರು.

ಸವರ್ಣೀಯರ ಗೂಂಡಾಗಿರಿ ಇಲ್ಲಿಗೇ ಮುಗಿಯಲಿಲ್ಲ. ಚಿಕ್ಕಮಗಳೂರಿನ ಅಂಬೇಡ್ಕರ್ ಸಂಘದ ಪರವಾಗಿ ಕಾಲೇಜು ವಿದ್ಯಾರ್ಥಿಗಳು ಸುತ್ತ ಮುತ್ತಲಿನ ಗ್ರಾಮಗಳಲ್ಲಿನ ದಲಿತ ವಿದ್ಯಾರ್ಥಿಗಳಿಗೆ ಪಾಠ ಹೇಳಿಕೊಡಲು ಹೋಗುವುದುಂಟು. ಘಟನೆ ನಡೆದ ದಿನ, ಪಾಠ ಹೇಳಲು ಹೋಗಿದ್ದ ಇಬ್ಬರು ವಿದ್ಯಾರ್ಥಿಗಳ ಮೇಲೂ ಹಲ್ಲೆ ಮಾಡಲಾಯಿತು. [illegible] ವಿದ್ಯಾರ್ಥಿಗಳು ಅಲ್ಲಿಂದ ತಪ್ಪಿ[illegible]ಕೊಂಡು ಪೋಲೀಸರಿಗೆ ಈ ಬಗ್ಗೆ ದೂರು ಸಲ್ಲಿಸಿದರು. ಪೋಲೀಸರು ತಕ್ಷಣ ಮಧ್ಯಪ್ರವೇಶಿಸಿದುದರಿಂದ, ಭೀಕರ ಅನಾಹುತ ತಪ್ಪಿದಂತಾಯಿತು.

ಅಂಬೇಡ್ಕರ್ ಸಂಘ, ಶಂಕರಪುರ, ಹಿರೇಮಗಳೂರು, ದಂಬರಮಕ್ಕಿ, ಬಿಳೇಕಲ್ಲು, ರಾಮನಹಳ್ಳಿ, ಕೆಂಪನಹಳ್ಳಿ, ಚಿಕ್ಕಕುರುಬರಹಳ್ಳಿಯ ಹರಿಜನರೂ, ಕಾಲೇಜ್ ವಿದ್ಯಾರ್ಥಿಗಳೂ ಸವರ್ಣೀಯರ ದೌರ್ಜನ್ಯದ ಪ್ರತಿಭಟನಾರ್ಥ ಗ್ರಾಮಾಂತರ ಪೋಲೀಸ್ ಠಾಣೆಗೆ ಹೋಗಿ, ಅಪರಾಧಿಗಳನ್ನು ಬಂಧಿಸುವಂತೆ ಒತ್ತಾಯಪಡಿಸಿದರು.

18ಜನ ಸವರ್ಣೀಯರನ್ನು ಬಂಧಿಸಿ ನಂತರ ಬಿಡುಗಡೆ ಮಾಡಲಾಯಿತು. ಆದರೆ, ಈಗ ಸುಳ್ಳು ಆರೋಪಗಳನ್ನು ಹೊರಿಸಿ ಹರಿಜನರನ್ನೇ ಬಂಧಿಸಲು ಹವಣಿಸಲಾಗುತ್ತಿದೆ ಎಂದು ತಿಳಿದು ಬಂದಿದೆ.

ನೊಂದ ಹರಿಜನರಿಗೆ ರಕ್ಷಣೆ ಹಾಗೂ ನ್ಯಾಯ ಲಭಿಸುವ ಯಾವ ಸಾಧ್ಯತೆಗಳೂ ಇದ್ದಂತಿಲ್ಲ. ಗಾಯಗೊಂಡ ಹರಿಜನರಿಗೆ ಚಿಕಿತ್ಸೆ ಒದಗಿಸಿದ ವೈದ್ಯರೂ ಕೂಡ ಸಮರ್ಪಕವಾದ ಸರ್ಟಿಫಿಕೇಟ್ ನೀಡದೆ, ಮಾಮೂಲು ಸರ್ಟಿಫಿಕೇಟ್ ನೀಡಿ ಆಸ್ಪತ್ರೆಯಿಂದ ಬಿಡುಗಡೆ ಮಾಡಿದ್ದಾರೆ.

ಚಿಕ್ಕ ಕುರುಬರ ಹಳ್ಳಿಯಲ್ಲಿ ಎರಡೇ ಕೋಮುಗಳ ಜನರು ವಾಸಿಸುತ್ತಾರೆ. ವೀರಶೈವರು ಹಾಗೂ ಹರಿಜನರು. ●

## ಕೂಗು ರಾಗ

ಎದ್ದರೆ ತುಳಿವ
ಸುಮ್ಮನಿದ್ದರೆ ಸಮಾಜವಾದ ಸಮತಾವಾದ
ಕೊರೆವ
ನಕ್ಕಾಗ ತಲೆಸವರಿ ಕತ್ತಿಗಗ್ಗವ ಬಿಗಿವ
ಅಲ್ಲದೆ
ನನ್ನಸ್ಪೃಶ್ಯ ಬಗರಿ ಮೂಳೆಗಳ ಮಧ್ಯೆ
ಬಲು ಥಾಳಾಗಿ ನಗುವ
ಅಪ್ಪಗಳಿಲ್ಲದ ಈ ಬೋಳಿಮಕ್ಕಳನ್ನೆಲ್ಲ ಹಿಡಿದು
ಗೌಡನ ಗದ್ದೆಯಲ್ಲಿ ಉತ್ತುತ್ತ ಸವೆದು
[illegible] ನಮ್ಮಪ್ಪನ ನೇಗಿಲ ಗುಳಕ್ಕೆ
ಸಿಕ್ಕಿಸಿ
ನೆಲಕ್ಕೊರಗಿಸಿ
ನೆನ್ನೆತಾನೇ ತಿದ್ದಿದ ಹೋರಿ ಕರಗಳ ಕಟ್ಟಿ
ನನ್ನ ಬರಡು ನೆಲವನ್ನೆಲ್ಲ ಸಿಕ್ಕಾಪಟ್ಟೆ
ಉಳಬೇಕೆಂದಿದ್ದೇನೆ.
–ಉತ್ತು ಎತ್ತರದ ಬೊಜ್ಜು ಮೊಯ್ಮಿಗಳ
ಗುದ್ದಲಿಯಲ್ಲಿ ಸವರಿ
ತೆವಡೆ ಹೊಗೆದು ಸರಿಮಾಡಿ
ಪಾತಿ ಕಟ್ಟಬೇಕೆಂದಿದ್ದೇನೆ.
- ಕಟ್ಟಿ ಕೆಂಪು ಕೆಂಪು ತೆರೆಯೊಳಗೆ
ಗುಳದ ಮೊನೆಯ ಜುಳು ಜುಳು
ರಕ್ತದೊಡನೆ ಒಂದೊಂದಾಗಿ ಒಂದೊಂದಾಗಿ
ಆಶೆ ಬೀಜಗಳನ್ನೆಲ್ಲ ಹರಡಬೇಕೆಂದಿದ್ದೇನೆ
–ಹರಡಿ ನಮ್ಮೂರ ಕಾಳಿ ಹಬ್ಬದ ಕುಣಿತ
ಕುಣಿಯ ಬೇಕೆಂದಿದ್ದೇನೆ
ಈ
ನಷ್ಟಾಶೆ ಆಕ್ರಂದನದ ಧ್ವನಿಗೆ
ಶತಮಾನದಳೆ ಉಸಿರ ಹಸಿದ ಕಣ್ಣಿಗಳ
ಕೂಗುರಾಗದ ಸ್ನೇಹ
ಬೇಕಾಗಿದೆ........ ಬೇಕಾಗಿದೆ........
ನೀರು ನೆಳ್ಳಿಲ್ಲದೆ ಬರಿಗಾಲಲ್ಲಿ
ನಿಮಗಾಗಿ ನಿಮ್ಮ ಧ್ವನಿಗಾಗಿ
ಊರೂರು ಅಲೆಯುತ್ತಿದ್ದೇನೆ
ಕೂಗಿ ಕೂಗಿ ಜನರೆ ನನ್ನವರೆ
ದನಿ ಎತ್ತರಿಸಿ ಕೂಗಿ
–ಇನ್ನೇಕೆ ತಡ
ಶುರು ಮಾಡುವ ಉಳುಮೆ
ಜೊತೆಗೆ
ಕಾಳಮ್ಮನ ಹಬ್ಬದ ಕುಣಿತ

—ಗೋವಿಂದಯ್ಯ

## ಚಿಕ್ಕಮಗಳೂರು ತಾ. ಆಣೂರು ಹಾಸ್ಟೆಲ್‌ನಲ್ಲಿ ದಬ್ಬಾಳಿಕೆ

# ವಿದ್ಯಾರ್ಥಿಗಳ ಬೇಡಿಕೆಗೆ ಸಿಕ್ಕಿದು; ದೊಣ್ಣೆ ಏಟುಗಳು

(ವರದಿ : ಎಂ.ಡಿ. ಗಂಗಯ್ಯ)

ಮಳೆ ಬೀಳಲಾರಂಬಿಸಿದರೆ ತೂತು ಬಿದ್ದಿರುವ ಹೆಂಚುಗಳಿಂದ ನೀರು ಸೋರುತ್ತದೆ. ಗೋಡೆ ಮತ್ತು ಮಾಡಿನ ಮರಗಳಿಗೆ ಗೆದ್ದಲು ಹತ್ತಿಕೊಂಡು ತಿನ್ನುತ್ತಿವೆ–ಇದು ಹಾಸ್ಟೆಲು ಕಟ್ಟಡದ ಸ್ಥಿತಿಯಾದರೆ-ಅದಕ್ಕೆ ತಕ್ಕಂತೆ ಇಲ್ಲಿನ ಊಟದ ವ್ಯವಸ್ಥೆ ಕೂಡ ಹಾಗೇ ಇದೆ. ಊಟಕ್ಕೆ ಕೊಡುವ ಮುಗ್ಗಿದ್ದ ಅಕ್ಕಿಯಲ್ಲಿ ಹುಳುಗಳು ಹರಿದಾಡುತ್ತಿದ್ದು ಅದನ್ನೂ ಸರಿಯಾಗಿ ಶುಚಿಮಾಡದೆ ಅನ್ನ ಬೇಯಿಸಿ ಹಾಕುತ್ತಿದ್ದು ಅನ್ನದಲ್ಲೆಲ್ಲಾ ಹುಳುಗಳಿರುತ್ತವೆ. ನೆಪಮಾತ್ರಕ್ಕೆ ತರುವ ಬಲಿತ ತರಕಾರಿ ಸಾರು. ಸರ್ಕಾರ ವಿದ್ಯಾರ್ಥಿಗಳಿಗಾಗಿ ಕೊಡುವ ಎಣ್ಣೆ, ಸೋಪು ಇತ್ಯಾದಿಗಳು ಕೂಡ ಅವರಿಗೆ ಸಿಗುತ್ತಿಲ್ಲ–ಇದು ಚಿಕ್ಕಮಗಳೂರು ತಾಲ್ಲೂಕಿನ ಆಣೂರು ಹರಿಜನ ವಿದ್ಯಾರ್ಥಿ ನಿಲಯದ ದುಸ್ಥಿತಿ.

ಇಂಥ ವ್ಯವಸ್ಥೆಯಲ್ಲಿ ವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು ತಮ್ಮ ಅನಾನುಕೂಲಗಳ ಬಗ್ಗೆ ವಾರ್ಡನ್‌ರವರಿಗೆ ಹೇಳಿಹೇಳಿ ಸಾಕಾಗಿ ಬಿ.ಡಿ.ಓ.ರಿಗೆ ದೂರು ಕೊಟ್ಟರೂ ಏನೂ ಪ್ರಯೋಜನವಾಗಲಿಲ್ಲ. ಇದರಿಂದ ಬೇಸತ್ತ ವಿದ್ಯಾರ್ಥಿಗಳು ಖುದ್ದು ಬಿ.ಡಿ.ಓ.ರವರನ್ನೇ ಕಾಣಲು ತಾರೀಖು 19-11-77ರಂದು ಆಣೂರಿನಿಂದ ಸುಮಾರು 14 ಕಿ.ಮೀ. ದೂರವಿರುವ ಚಿಕ್ಕಮಗಳೂರಿಗೆ ಕಾಲು ನಡಿಗೆಯಲ್ಲಿ ಹೋದರು. ಆದರೆ ಅವತ್ತೇ ಬೇರಾವುದೋ ಊರಿಗೆ ಹೋಗಿದ್ದ ಬಿ.ಡಿ.ಓ. ಸಿಗದಿದ್ದರಿಂದ ಅವತ್ತು ರಾತ್ರಿ ಅಂಬೇಡ್ಕರ್ ಸಂಘದ ಆಶ್ರಮದಲ್ಲಿ ತಂಗಿದ್ದು ಮಾರನೆ ದಿನ ಸಂಘದ ಸದಸ್ಯರ ಜೊತೆ ತಮ್ಮ ಬೇಡಿಕೆಯ ಮನವಿಯನ್ನು ಜಿಲ್ಲಾಧಿಕಾರಿಗಳಿಗೆ ಕೊಟ್ಟಾಗ—ಅವರು ಎಲ್ಲಾ ನೋಡಿ ಸೂಕ್ತ ಕ್ರಮ ತೆಗೆದುಕೊಂಡು ಅನುಕೂಲ ಮಾಡತ್ತೇನೆಂದು ಭರವಸೆ ಕೊಟ್ಟರು.

ಅದೇ ದಿನ ಎ. ಸಿ. ಮತ್ತು ತಹಸೀಲ್ದಾರರು ಹಾಸ್ಟಲಿಗೆ ಬಂದು ಹುಳುವಿರುವ ಮುಗ್ಗಿದ ಅಕ್ಕಿಯನ್ನು ನೋಡಿದರೂ ಸಹ—ನಾವೂ ಇಂತಹ ಅಕ್ಕಿಯನ್ನೇ ತಿಂಡಿಗೆ ಉಪಯೋಗಿಸುತ್ತೇವೆ ಅನ್ನುತ್ತಾ ಇದನ್ನೇ ಸರಿಯಾಗಿ ಶುಚಿ ಮಾಡಿ ಅಡಿಗೆ ಮಾಡಿ ಅಂದವರೇ ಹೊರಟು ಹೋದರು. ಇದಾದ ನಂತರ ತಾರೀಖು 21-11-77ರಂದು ಬಿ.ಡಿ.ಓ.

[4ನೇ ಪುಟಕ್ಕೆ]

# ಜಮೀನ್ದಾರರು ನಡೆಸುತ್ತಿರುವ ಮೃಗೀಯ ಬೇಟೆ

ವನ್ನು ಧಿಕ್ಕರಿಸಿ ಪಕ್ಕದ ಅಲೋತ್ ಗ್ರಾಮದ ಕಾಂಗ್ರೆಸ್ಸಿಗ ರಾಮಲಾಲನ ಜಮೀನನ್ನು ಕೃಷಿ ಮಾಡಿದ. ಕನಾಡಿಯಾದ ಹತ್ಯಾಕಾಂಡದ ಬಗ್ಗೆ ಸರ್ಕಾರದ ಹೇಳಿಕೆಯಂತೆ "ಇದು ಹಳ್ಳಿಗರನ್ನು ಒಳಹವಾಗಿ ನೋಯಿಸಿತು". ಆಗಸ್ಟ್ 8ರಂದು ಊರಿನ ದೇವಸ್ಥಾನ ಒಂದರಲ್ಲಿ ಜಮೀನ್ದಾರರುಗಳ ಬೆಂಬಲದಿಂದ ಒಂದು ಹರಿಜನೇತರರ ಸಭೆ ನಡೆಯಿತು. ಸರ್ಕಾರ ಕೊಟ್ಟಿರುವ ಹೇಳಿಕೆ ಪ್ರಕಾರ "ಈ ಸಭೆಯಲ್ಲಿ ಹಳ್ಳಿಗರು ವಿವಾದಾತ್ಮಕ ಜಮೀನಿನಲ್ಲಿ ದನಗಳನ್ನು ಮೇಯಿಸುವ ತೀರ್ಮಾನವನ್ನು ತೆಗೆದುಕೊಂಡರು". ಮಾರನೆ ದಿನ ಬೆಳಕು ಹರಿಯುವ ಹೊತ್ತಿಗೆ ಜಮೀನ್ದಾರರ ದನಗಳು ಬೆಳೆದಿದ್ದ ಹರಿಜನರ ಬೆಳಸಿನ ಮೇಲೆ ಮುತ್ತಿಕೊಂಡಿದ್ದವು. ಹರಿಜನರು ಪ್ರತಿಭಟಿಸಿದಾಗ ಆ ಸಮಯಕ್ಕೆಂದೇ ಸಿದ್ಧವಾಗಿದ್ದ ಗುಂಪು ಅವರ ಮೇಲೆ ಧಾಳಿ ಮಾಡಿತು. ಓಂಕಾರ್, ಅವರ ಮಗ ರತನ್, ಗುಲಾಬ್, ಕಾನಾ ಸ್ಥಳದಲ್ಲೇ ಸತ್ತು ಬಿದ್ದರು. ಗಾಯಗೊಂಡ 17 ಜನರಲ್ಲಿ 12 ವರ್ಷದ ಲೀಲಾ ಎನ್ನುವ ಹುಡುಗಿ ತನ್ನ 20 ವರ್ಷದ ಅಕ್ಕ ಕಸ್ತೂರಿಯನ್ನು ರಕ್ಷಿಸಲು ಪ್ರಯತ್ನಿಸಿದಾಗ ಗಾಯಗೊಂಡಳು. ಸರ್ಕಾರಿ ಅಧಿಕಾರಿಗಳು ಈ ಘಟನೆಯನ್ನು ಮುಚ್ಚಿ ಹಾಕಲು ಸರ್ವಪ್ರಯತ್ನ ಮಾಡಿದರು. ಅವರ ಹೇಳಿಕೆಯ ಪ್ರಕಾರ" ಕನಾಡಿಯಾದಲ್ಲಿ ಎರಡು ಗುಂಪುಗಳು ಗೋಮಾಳದ ವಿವಾದಕ್ಕೆ ಸಂಬಂಧಪಟ್ಟಂತೆ ಹೊಡೆದಾಡಿಕೊಂಡವು".

ಈ ಘಟನೆಗೆ ಸಂಬಂಧಿಸಿದಂತೆ 38 ಜನರನ್ನು ಬಂಧಿಸಲಾಗಿದೆ ಆದರೆ ಎಫ್.ಐ.ಆರ್. ಕೇಸಿಗೆ ಒಳಗಾಗಿರುವ ಪ್ರಭಾವಶಾಲಿ ಶ್ರೀಮಂತರನ್ನು ಪೋಲೀಸರು ಇನ್ನೂ ಬಂಧಿಸಿಲ್ಲ ಎಂದು ಹರಿಜನರು ಆರೋಪಿಸಿದ್ದಾರೆ. ಈಗ ಕೆಲಸವಿಲ್ಲದ ಹರಿಜನರು ಕೈಕಟ್ಟಿ ಕೂತಿದ್ದಾರೆ. "ಅವರು ಕೆಲಸ ಕೊಡದಿದ್ದರೆ ನಾವು ಹಳ್ಳಿಯನ್ನೇ ಬಿಡಬೇಕಾಗುತ್ತದೆ" ಎನ್ನುವ ಮಟ್ಟಿಗೆ ಹಸಿವು ಇವರನ್ನು ಕಾಡುತ್ತಿದೆ.

ಇಂಥ ಘಟನೆಗಳು ಕಳೆದ ಜೂನಿಂದ ಮಧ್ಯಪ್ರದೇಶದ ಹಲವಾರು ಸ್ಥಳಗಳಲ್ಲಿ ನಡೆಯುತ್ತಲೇ ಇವೆ. ಹರಿಜನರನ್ನು ಕೊಲ್ಲುವುದು ಥಳಿಸುವುದು, ಮಂಜೂರಾದ ಜಮೀನನ್ನು ಕಿತ್ತುಕೊಳ್ಳುವುದು, ಮನೆ ಬೆಳೆಗಳಿಗೆ ಬೆಂಕಿ ಹಚ್ಚುವುದು ಇತ್ಯಾದಿ ಘಟನೆಗಳಲ್ಲಿ ಜೂನಿಂದ ಇದವರೆಗೆ 24ಕ್ಕೂ ಹೆಚ್ಚು ಜನರನ್ನು ಕೊಲ್ಲಲಾಗಿದೆ. ಇಲ್ಲಿ ಕೊಟ್ಟಿರುವ ಇತರ ಕೆಲವು ಮಧ್ಯಪ್ರದೇಶದ ಘಟನೆಗಳನ್ನು ನೋಡಿ.

## ದೌರ್ಜನ್ಯದ ಘಟನೆಗಳು :

- ಜೂನ್ 20 ರಂದು ಪಹಜಾಪುರದ ಕಾಲಿಯಾಖೆಡಿ ಗ್ರಾಮದಲ್ಲಿ ಪ್ಯಾರಾಜಿ ಎನ್ನುವವ ಕಳೆದವರ್ಷ ತನಗೆ ಮಂಜೂರಾದ ಜಮೀನನ್ನು ಉಳಲು ಹೋದಾಗ ರಜಪೂತ ಜಮೀನ್ದಾರರು ಅವನನ್ನು ಹೊಡೆದು ಕೊಂದು ಹಾಕಿದರು. ಇವನ ಇಬ್ಬರು ಮಕ್ಕಳು ಬಗ್ದು ಮತ್ತು ಜಗ್ಗು ಜಮೀನಿಂದ ತಪ್ಪಿಸಿಕೊಂಡು ಓಡಿಹೋಗಿ ತಮ್ಮ ಮನೆಯಲ್ಲಿ ಅವಿತುಕೊಂಡರು. ದೊಣ್ಣೆ ಹಿಡಿದ ಠಾಕೂರರು ಅವರನ್ನು ಅಟ್ಟಿಸಿಕೊಂಡು ಮನೆಗೆ ನುಗ್ಗಿ ಅವರನ್ನು ಹೊರಗೆಳೆದು ಥಳಿಸಿದರು. ಯಾಚಿಸಿಕೊಂಡ ಅವರ ತಾಯಿ ಮೆಹರಬ್‌ಬಾಯಿಯ ಮೇಲೆ ಹಲ್ಲೆ ನಡೆಸಿದರು.
- ಜುಲೈ 8ರಂದು ವಿದಿಶಾ ಜಿಲ್ಲೆಯ ಕರುವಾ ಎಂಬ ಹಳ್ಳಿಯಲ್ಲಿ ಮೂವರು ಹರಿಜನರಿಗೆ ಮಂಜೂರಾದ ಜಮೀನಿನ ಮೇಲೆ ರಜಪೂತರು ದನಗಳನ್ನು ಮೇಯಲು ಬಿಟ್ಟರು. ಹರಿಜನರು ಇದನ್ನು ಪ್ರತಿಭಟಿಸಿದಾಗ ಲಾಠಿ ಮತ್ತು ಈಟಿಗಳಿಂದ ಶಸ್ತ್ರಸಜ್ಜಿತರಾದ ಠಾಕೂರರು ಅವರ ಮೇಲೆ ದಾಳಿ ನಡೆಸಿದರು. ಸೋನ ಎನ್ನುವವ ಸ್ಥಳದಲ್ಲೇ ಮೃತಪಟ್ಟ. ಕಲ್ಲಾ ಮತ್ತು ಬುದ್ಧಾ ಎಂಬ ಉಳಿದಿಬ್ಬರನ್ನು ಚಿಂತಾಜನಕಸ್ಥಿತಿಯಲ್ಲಿ ಆಸ್ಪತ್ರೆಗೆ ಸೇರಿಸಲಾಯಿತು. ಹೊಲಗಳಲ್ಲಿ ಕೆಲಸ ಮಾಡುತ್ತಿದ್ದ ಹೆಂಗಸರೂ ಠಾಕೂರರ ಕೈಯಿಂದ ತಪ್ಪಿಸಿಕೊಳ್ಳಲಾಗಲಿಲ್ಲ.
- ಜುಲೈ 18 ರಂದು ಬೇತುಲ್ ಜಿಲ್ಲೆಯ ಲಕ್ಕಡಗ್ರಾಮ ಎಂಬ ಹಳ್ಳಿಯಲ್ಲಿ ಒಬ್ಬ ಹರಿಜನ ರೈತ ತನಗೆ ಮಂಜೂರಾದ ಜಮೀನನ್ನು ಉಳಲು ಹೋದಾಗ ಜಮೀನ್ದಾರನೊಬ್ಬ ಅವನನ್ನು ಕೊಂದುಹಾಕಿದ. ಜಮೀನ್ದಾರನಿಂದ ಅತಿಕ್ರಮಿಸಲ್ಪಟ್ಟಿದ್ದ ಈ ಜಮೀನನ್ನು ಹರಿಜನ ರೈತ ಕೆಲವು ದಿನಗಳ ಹಿಂದೆಯಷ್ಟೆ ಕೋರ್ಟಿನ ಮಧ್ಯಪ್ರವೇಶದಿಂದ ತನ್ನ ವಶಕ್ಕೆ ಪಡೆದಿದ್ದ.
- ಜುಲೈ 21ರಂದು ರಾಯಿಸನ್ ಜಿಲ್ಲೆಯ ಸಚೀತ್ ಹಳ್ಳಿಯ ಸರಪಂಚರ ನಾಯಕತ್ವದಲ್ಲಿ ಗುಂಪೊಂದು 60 ವರ್ಷದ ಹರಿಜನ ಹೆಂಗಸನ್ನು ಕೊಡಲಿಯಿಂದ ಕೊಚ್ಚಿ ಹಾಕಿತು. ಆಕೆ ತನಗೆ ಮಂಜೂರಾದ ಜಮೀನಿನಲ್ಲಿ ಕೆಲಸ ಮಾಡುತ್ತಿದ್ದಳು.
- ಸಾಗರ್ ಜಿಲ್ಲೆಯ ಪಾರಸರಿಕಲನ್ ಹಳ್ಳಿಯಲ್ಲಿ ರಾಮ್‌ಸವೂಸ್ ಎನ್ನುವ ಹರಿಜನ ವ್ಯಕ್ತಿಯನ್ನು ಬಲಾತ್ಕಾರವಾಗಿ ಕಾಡಿಗೆ ಕೊಂಡೊಯ್ದು ಕೊಲ್ಲಲಾಯಿತು. ನಂತರ ಹೆಣವನ್ನು ಅವನ ಮನೆಯಲ್ಲೇ ನೇತು ಹಾಕಲಾಗಿತ್ತು.
- ಜುಲೈ 28ರಂದು ವಿದಿಶಾ ಜಿಲ್ಲೆಯ ಸಾಯಿಖೆಡಾ ಎಂಬ ಹಳ್ಳಿಯಲ್ಲಿ ಮನಾಗ್ಗಿಯಾ ಎನ್ನುವ ವ್ಯಕ್ತಿಯನ್ನು ಕೊಲ್ಲಲಾಯಿತು. ವಿದಿಶಾ ಜಿಲ್ಲೆಯ ತುರಿಯಾ ಹಳ್ಳಿಯಲ್ಲಿ ಒಬ್ಬನನ್ನು ಜೀವಂತವಾಗಿ ಅರೆಯುವ ಯಂತ್ರಕ್ಕೆ ತುರುಕಿ ಕೊಲ್ಲಲಾಯಿತು.
- ಆಗಸ್ಟ್ 8ರಂದು ಛತ್ರರ್‌ಪುರ್ ಜಿಲ್ಲೆಯ ಸೆಂದುವಾ ಎಂಬ ಹಳ್ಳಿಯಲ್ಲಿ ರಜಪೂತ ಜಮೀನ್ದಾರನೊಬ್ಬ ಪುಕ್ಕಟೆ ಕೆಲಸ ಮಾಡಲು ನಿರಾಕರಿಸಿದ ಇಬ್ಬರು ಆದಿವಾಸಿ ಕೂಲಿಗಾರರ ಮೂಗುಗಳನ್ನು ಕತ್ತರಿಸಿಹಾಕಿದ.
- ಗುಣಾ ಜಿಲ್ಲೆಯ ಡೆಹಾರಿಕಾಲನ್ ಎಂಬ ಹಳ್ಳಿಯಲ್ಲಿ ಕೆಲವು ಸವರ್ಣೀಯ ರೈತರು ಜೂನ್ 11 ರಂದು ಸರ್ಕಾರ ಕಟ್ಟಿಸಿಕೊಟ್ಟಿದ್ದ 17 ಹರಿಜನರ ಮನೆಗಳಿಗೆ ಬೆಂಕಿ ಹಾಕಿದರು. ಮನೆಯ ಸಾಮಾನುಗಳನ್ನು ಉರಿಯುತ್ತಿದ್ದ ಬೆಂಕಿಗೆ ಎಸೆದರು. ಅಧಿಕಾರಿಗಳಿಗೆ ಈ ವಿಷಯ ವರದಿಯಾದಾಗ ಒಬ್ಬ ತಹಸಿಲ್ದಾರನನ್ನು ತನಿಖೆ ಮಾಡಲು ಕಳುಹಿಸಿಕೊಡಲಾಯಿತು. ಅವನು ಹಳ್ಳಿಗೆ ಬಂದು ಜಮೀನ್ದಾರನ ಮನೆಯ ಉಪಚಾರವನ್ನು ಅನುಭವಿಸಿ ಹಿಂದಕ್ಕೆ ಹೋದ.

[–ಎನ್. ಕೆ. ಸಿಂಗ್ ಅವರ ಇಂಡಿಯನ್ ಎಕ್ಸ್‌ಪ್ರೆಸ್ ಪ್ರತಿಕೆಯಲ್ಲಿನ (ನ. 24) ವರದಿ ಮತ್ತು ಫ್ರಾಂಟಿಯರ್ ವಾರ ಪತ್ರಿಕೆಯಲ್ಲಿನ (ನ. 5) ಲೇಖನದಿಂದ]

## ದಾಖಲೆಗಳು

- ಬತ್ತಿ : ಜಲಾಲ್ಪುರ ಗ್ರಾಮದಲ್ಲಿ ಬಲವಂತವಾಗಿ ಜೀತ ಮಾಡಲು ಹರಿಜನರು ನಿರಾಕರಿಸಿದ್ದಕ್ಕಾಗಿ ಸವರ್ಣೀಯರು ಹರಿಜನರ ಮೇಲೆ ಹಲ್ಲೆ ನಡೆಸಿದುದರಿಂದ ಒಬ್ಬ ಹರಿಜನ ಕೊಲೆಯಾಗಿ ಇತರ ಆರು ಮಂದಿಗೆ ತೀವ್ರವಾಗಿ ಪೆಟ್ಟುಗಳಾಗಿದೆ.

—ಕನ್ನಡ ಪ್ರಭಾ
14-11-77

# ಕೊಳ್ಳೆಗಾಲದ ಘಟನೆ ದಲಿತರಿಗೆ ಒಂದು ಪಾಠ: ಕಾಂಗ್ರೆಸ್–ಜನತಾ ಜಗಳಕ್ಕೆ ದಲಿತರ ಬಲಿ

(ವರದಿ : ಪಂಚಮ ಪ್ರತಿನಿಧಿಯಿಂದ)

ಪ್ರಾರಂಭವಾದದ್ದು ರಾಜಕೀಯ ಪಕ್ಷಗಳ ಕಲಹ. ಆದರೆ ಅದು ಬಂದು ನಿಂತದ್ದು ಜಾತಿ ಕಲಹದಲ್ಲಿ. ಇಂಡಿಯಾದಲ್ಲಿ ಏನೇ ನಡೆದರೂ ಹೀಗೇ. ಅಕ್ಟೋಬರ್ 10ರಂದು ಕೊಳ್ಳೇಗಾಲದಲ್ಲಿ ನಡೆದ ಗಲಭೆ ಪ್ರಾರಂಭವಾಗಿ ಮುಗಿದದ್ದು ಇದೇ ಥರ. ಇಂದಿರಾ ಗಾಂಧಿಯನ್ನು ಅರೆಸ್ಟ್ ಮಾಡಿದ್ದನ್ನ ಪ್ರತಿಭಟಿಸುವ ಮೆರವಣಿಗೆಯಿಂದ ಪ್ರಾರಂಭವಾದ ಈ ಗಲಭೆ ಕೊನೆಗೆ ಹರಿಜನರ ಮತ್ತು ಮೇಲ್ಜಾತಿಯವರ ನಡುವಿನ ಕಲಹವಾಯಿತು. ಕೊಳ್ಳೇಗಾಲದ ತುಂಬಾ ಭಯಭೀತಿ ಹರಿದಾಡಿತು. ಡಿ 10 ರಂದು ವಿಧಿಸಿದ 144ರ ನಿಷೇದಾಜ್ಞೆ ತಿಂಗಳು ಗಟ್ಟಲೆ ಹಾಗೇ ಉಳಿಯಿತು.

### ಕಾಂಗ್ರೆಸ್ ಮೆರವಣಿಗೆ

ಇಂದಿರಾಗಾಂಧಿಯವರನ್ನು ಅರೆಸ್ಟು ಮಾಡಿದಾಗ ಇಂಡಿಯಾದ ಇತರ ಎಲ್ಲಾ ಊರುಗಳಂತೆ ಕೊಳ್ಳೇಗಾಲದಲ್ಲೂ ಅದನ್ನು ಪ್ರತಿಭಟಿಸುವ ಹುಮ್ಮಸ್ಸು ಕಾಣಲಿಲ್ಲ. ಆದರೆ ಕೊಳ್ಳೇಗಾಲದ ಕಾಂಗ್ರೆಸ್ ಪಕ್ಷದ ಘಟಕಕ್ಕೆ ಇದೊಂದು ಕರ್ತವ್ಯವಾಗಿದ್ದುದರಿಂದ ಇಂದಿರಾ ಗಾಂಧಿಯ ಬಂಧನವನ್ನು ವಿರೋಧಿಸಿರಿಂದ ಒಂದು ಮೆರವಣಿಗೆಯನ್ನು ಮಾಡಲೇಬೇಕಾಗಿತ್ತು. ಇಷ್ಟಕ್ಕೂ ಕಾಂಗ್ರೆಸ್ಸಿನ ಹಿಂದೆ ಜನರೇ ಇರಲಿಲ್ಲ. ಕಾಂಗ್ರೆಸ್ಸಿಗೆ ಬಲವಾಗಿ ಅಂಟಿಕೊಂಡಿದ್ದ ಹರಿಜನರೂ ಕಾಂಗ್ರೆಸ್ಸಿನ ಬಗ್ಗೆ ಯೋಚಿಸತೊಡಗಿದ್ದರು. ಕಾಂಗ್ರೆಸ್ಸಿಗರು ಮೆರವಣಿಗೆ ಮಾಡಲು ಸಪೋರ್ಟು ಕೇಳಿದಾಗ "ಆಗಲ್ಲ" ಅಂತ ಕಡಾಖಂಡಿತವಾಗಿ ಹೇಳಿಯೂಬಿಟ್ಟರು.

### ಗಾಜು ಪುಡಿ ಪುಡಿ

ಅಂತು ಅನಿವಾರ್ಯವಾಗಿದ್ದರಿಂದ ಕೈಕಾಲು ಕಟ್ಟಿ ಕಾಂಗ್ರೆಸ್ ಧುರೀಣರು ಬಂದಷ್ಟು ಜನರನ್ನು ಸೇರಿಸಿಯೇ ಬಿಟ್ಟರು. ಮೆರವಣಿಗೆ ಹೊರಟಿತು.

ಎಲ್ಲಾ ಜಾತಿಯಿಂದಲೂ ಸೇರಿ ಪ್ರಾರಂಭದಲ್ಲಿ ಬರಿ ಐವತ್ತರವತ್ತು ಜನರಿದ್ದ ಕಾಂಗ್ರೆಸ್ ಮೆರವಣಿಗೆಗೆ ಬರಬರುತ್ತಾ ನೂರಾರು ಜನ ಸೇರಿಕೊಂಡರು. ಕೊಳ್ಳೇಗಾಲದ ತಾಲ್ಲೂಕು ಆಫೀಸಿನಿಂದ ಹೊರಟ ಮೆರವಣಿಗೆ ರಸ್ತೆಯಲ್ಲಿ ಸಿಕ್ಕ ಎಲ್ಲಾ ಅಂಗಡಿಗಳನ್ನೂ ಬಾಗಿಲು ಮುಚ್ಚಿಸಿತು. ಆದರೆ ಗೀತಾಭವನ್ ಮತ್ತು ಆದರ್ಶ ಹೋಟೆಲ್‌ಗಳ ಬಾಗಿಲು ಮುಚ್ಚಲಿಲ್ಲ. ಆದರ್ಶ ಹೋಟೆಲಿನ ಮಾಲೀಕ ಶ್ರೀನಿವಾಸರಾವ್ ಜನತಾಪಕ್ಷದ ಅಧ್ಯಕ್ಷರಾಗಿದ್ದು "ನೀವು ಏನೇ ಮಾಡಿದರೂ ನಾನು ಬಾಗಿಲು ಹಾಕಲ್ಲ. ಏನಾರೂ ಆದರೆ ನಮ್ಮ ಜನತಾ ಸರ್ಕಾರ ನೋಡಿಕೊಳ್ಳುತ್ತದೆ". ಇತ್ಯಾದಿ ಹೆಚ್ಚು ಕಡಿಮೆ ಮಾತಾಡಲಾಗಿ ಮೆರವಣಿಗೆಯಲ್ಲಿದ್ದ ಜನ ಆದರ್ಶ ಹೋಟೆಲಿನ ಗಾಜಿಗೆ ಕಲ್ಲು ಬೀರಿದರು. ಗಾಜು ಪುಡಿ ಪುಡಿಯಾಯಿತು. ಮುಂದೆ ಯಥಾ ಪ್ರಕಾರ ಹೊರಟ ಮೆರವಣಿಗೆ ಒಂದು ಛತ್ರದಲ್ಲಿ ಸಭೆ ಸೇರುವ ಕಾರ್ಯಕ್ರಮವಿತ್ತು. ಅದರಂತೆ ಮೆರವಣಿಗೆಯ ಬಹಳಷ್ಟು ಜನ ಛತ್ರದ ಕಡೆ ಹೊರಟರು ಆದರೆ ಮೆರವಣಿಗೆಯ ಇನ್ನೊಂದು ಗುಂಪು ಇನ್ನೊಂದು ರಸ್ತೆಯಲ್ಲಿ ಮೆರವಣಿಗೆ ಹೊರಟಿತು. ಮೆರವಣಿಗೆ ಹೊರಟ ರಸ್ತೆಯಲ್ಲಿ ಬರಿ ಮೇಲ್ಜಾತಿಯವರ ಮನೆಗಳೇ ಇದ್ದು,

[6ನೇ ಪುಟಕ್ಕೆ]

# ದ್ವೇಷ ಇನ್ನೂ ಹೊಗೆಯಾಡುತ್ತಲೇ ಇದೆ

[5ನೇ ಪುಟದಿಂದ]

ಮೆರವಣಿಗೆಯಲ್ಲಿದ್ದ ಜನರ ಸಂಖ್ಯೆ ಕಡಿಮೆಯಾಗುತ್ತಾ ಬಂತು. ಕೊನೆಗೆ ಮೆರವಣಿಗೆಯಲ್ಲಿ ಮೂವತ್ತು ನಲವತ್ತು ಜನವಷ್ಟೇ ಉಳಿದುಕೊಂಡರು. ಇಷ್ಟರಲ್ಲಿ ದೊಣ್ಣೆ ಮಚ್ಚುಗಳಿಡಿದಿದ್ದ ಒಂದು ಗುಂಪು ಈ ಮೆರವಣಿಗೆಯವರನ್ನು ಅಟ್ಟಿಸಿಕೊಂಡು ಬಂತು. ಸಿಕ್ಕಸಿಕ್ಕವರಿಗೆಲ್ಲ ಥಳಿಸಿತು.

**ದಲಿತ ಎಂ.ಎಲ್.ಎ.ಗೆ ಏಟು**

ಇಷ್ಟೊತ್ತಿಗೆ ಕಾಂಗ್ರೆಸ್ಸಿನ ಧುರೀಣರುಗಳು ಛತ್ರದಲ್ಲಿ ಸಭೆಸೇರುತ್ತಿದ್ದರು. ಭಾಷಣ ಮಾಡಲು ಮೈಕು ಇತ್ಯಾದಿ ಎಲ್ಲಾ ಏರ್ಪಾಡೂ ಮಾಡಲಾಗಿತ್ತು. ಆದರೆ ಈ ಸಮಯಕ್ಕೆ ದೊಣ್ಣೆ ಮಚ್ಚುಗಳಿಡಿದಿದ್ದ ಗುಂಪು ಇಲ್ಲಿಗೂ ಬಂತು. ದೊಣ್ಣೆ ಮಚ್ಚುಗಳನ್ನು ನೋಡಿದ ಕಾಂಗ್ರೆಸ್ಸಿಗರು ಓಡಿಹೋದರು. ಆದರೆ ಓಡಲಾರದೆ ಅಲ್ಲೇ ನಿಂತಿದ್ದ ದಲಿತ ಎಂ.ಎಲ್ ಎ ಸಿದ್ಧಮಾದಯ್ಯನವರಿಗೆ ಚೆನ್ನಾಗಿ ಥಳಿಸಿದರು. ಕಲ್ಲಲ್ಲಿ ಮುಖವನ್ನು ಜಜ್ಜಿದರು.

**ಹರಿಜನ ಹಾಸ್ಟಲಿಗೆ ಬೆಂಕಿ**

ದೊಣ್ಣೆ ಮಚ್ಚುಗಳ ಗುಂಪು ಸಿದ್ಧಮಾದಯ್ಯನವರಿಗೆ ಚೆನ್ನಾಗಿ ಥಳಿಸಿದ ಮೇಲೆ ಹತ್ತಿರದಲ್ಲೇ ಇದ್ದ ಹರಿಜನ ವಿದ್ಯಾರ್ಥಿ ನಿಲಯಕ್ಕೆ ನುಗ್ಗಿತು. ಕೇವಲ ಹೈಸ್ಕೂಲು ವಿದ್ಯಾರ್ಥಿಗಳಷ್ಟೇ ಇರುವ ಈ ಹಾಸ್ಟಲಿನಲ್ಲಿ ಈ ಸಮಯಕ್ಕೆ ರಜೆ ಇದ್ದುದರಿಂದ ವಿದ್ಯಾರ್ಥಿಗಳಾರೂ ಇರಲಿಲ್ಲ. ದೊಣ್ಣೆ ಮಚ್ಚುಗಳ ಜನರು ಹಾಸ್ಟಲಿಗೆ ನುಗ್ಗಿ ಪ್ರತಿ ರೂಮಿನ ಬಾಗಿಲುಗಳನ್ನ ಹಾರೆಯಿಂದ ಮುರಿದರು. ಒಳಗೆ ಇದ್ದಬದ್ದ ಸಾಮಾನುಗಳನ್ನೆಲ್ಲ ಲೂಟ ಮಾಡಿದರು. ಪೆಟ್ರೋಲು ಎರಚಿ ಪ್ರತಿ ರೂಮಿಗೆ ಬೆಂಕಿ ಇಟ್ಟರು. ವಿದ್ಯಾರ್ಥಿಗಳ ಹಾಸಿಗೆ ದಿಂಬು ಬಟ್ಟೆ ಬರೆಗಳೆಲ್ಲ ಬಾವಿಯಲ್ಲಿ ಬೆಂಕಿ ಪಾಲಾದವು.

**ಬಾವಿಯಲ್ಲಿ ಹಾಲು**

ಹಾಸ್ಟೆಲಿನ ಸ್ಟೋರ್ ರೂಮಿನ ಬಾಗಿಲನ್ನು ಹೊಡೆದು, ಇಟ್ಟಿದ್ದ ಅಕ್ಕಿ, ಗೋಧಿ, ಸಕ್ಕರೆ ಇತ್ಯಾದಿ ಸಾಮಾನುಗಳನ್ನೆಲ್ಲ ಲೂಟಮಾಡಿ ರೂಮಿಗೆ ಬೆಂಕಿ ಇಟ್ಟರು. ಊಟಮಾಡುವ ತಟ್ಟೆಗಳನ್ನೆಲ್ಲಿ ಸಾರ್ವಜನಿಕ ರಸ್ತೆಯಲ್ಲಿ ಬಯ್ಯುತ್ತಾ ಚೆಲ್ಲಾಡಿದರು. ಒಚ್ಚಲಿಗೆ ತುಳಿದರು. ಹೊರಗಿನ ಕಾಂಪೌಂಡನ್ನು ಹಾರೆಗಳಿಂದ ಕೆಡವಿದರು. ವಿದ್ಯಾರ್ಥಿಗಳಿಗಾಗಿ ಇಟ್ಟಿದ್ದ ಹಾಲಿನ ಪುಡಿಯ ಚೀಲಗಳನ್ನು ಬಾವಿಗೆ ಎಸೆದರು. ಬೆಳಗ್ಗೆ ನೋಡಿದಾಗ ಬಾವಿಯಲ್ಲಿ ಹಾಲು ತುಂಬಿತ್ತು.

–ಇವಿಷ್ಟು ಅಕ್ಟೋಬರ್ 10 ರಂದು ರಾತ್ರಿ 7 ಗಂಟೆಗೆ ಮೊದಲು :ಕೊಳ್ಳೇಗಾಲದಲ್ಲಿ ನಡೆದ ಘಟನೆ. ಕಾಂಗ್ರೆಸ್ ಮೆರವಣಿಗೆ ಸೇರಲು ತಾವು ವಿರೋಧಿಸಿದ್ದರೂ ನಡೆದ ಈ ಘಟನೆಗಳ ಬಗ್ಗೆ ದಲಿತರು ಗಂಭೀರವಾಗಿ ಯೋಚಿಸಬೇಕಾಯಿತು.

**ದಲಿತರು ಎದ್ದರು**

ಕಾಂಗ್ರೆಸ್ ಮೆರವಣಿಗೆಯಲ್ಲಿ ಎಲ್ಲಾ ಜಾತಿಯವರೂ ಇದ್ದರೂ ಏಟು ಬಿದ್ದುದು ದಲಿತರಿಗೆ. ಲೂಟಿಯಾದದ್ದು, ಬೆಂಕಿಬಿದ್ದುದು ದಲಿತ ವಿದ್ಯಾರ್ಥಿ ನಿಲಯಕ್ಕೆ. ದಲಿತರ ಹತ್ತಿಪ್ಪತ್ತು ಜನರು ಕಾಂಗ್ರೆಸ್ ಮೆರವಣಿಗೆಯಲ್ಲಿ ಸೇರಿದ್ದುದು ನಿಜ ಆದರೆ ಈಗ ಸಿಕ್ಕ ಸಿಕ್ಕ ದಲಿತರನ್ನೆಲ್ಲ ಮೇಲ್ಜಾತಿಯವರು ಥಳಿಸುತ್ತಿದ್ದಾರೆ. ಇದನ್ನ ಕಂಡು ರೊಚ್ಚಿಗೆದ್ದ ದಲಿತರು ಪ್ರತಿಯಾಗಿ "ಬೆಂಕಿ ಲೂಟಿ" ಎಂದೆಲ್ಲಾ ಯೋಚಿಸಿದರು. ಹಾಗೆ ಮಾಡಲು ದಲಿತರ ಗುಂಪೊಂದು ರೆಡಿಯಾಗಿಯೇ ರಾತ್ರಿ 8 ಗಂಟೆಯಲ್ಲಿ ಹೊರಟಿತು. ಆದರೆ ಅಷ್ಟರಲ್ಲಿ ದಲಿತರ ಹಾಸ್ಟೆಲಿಗೆ ಬೆಂಕಿ ಬೀಳುತ್ತಿದ್ದಾಗ "ಅಸಹಾಯಕರಾಗಿದ್ದ" ಸರ್ಕಲ್ ಇನ್‌ಸ್ಪೆಕ್ಟರು ಬಂದು ದಲಿತರ ಅಡ್ಡ ನಿಂತು (ಸರ್ಕಲ್ ಇನ್‌ಸ್ಪೆಕ್ಟರ್ ಕೂಡ ದಲಿತ ಜಾತಿ) "ನನ್ನ ಮಾನ ಉಳಿಸಿ" "ಬೆಂಕಿ ಹಾಕಲು ಹೋದರೆ ನನ್ನ ಕೊಂದುಹೋಗಿ ಇತ್ಯಾದಿಯಾಗಿ ಬೇಡಿಕೊಂಡರು. ತಲೆಬಾಗಿದ ದಲಿತರು ವಾಪಸ್ಸು ಹೋದರು. ಆದರೆ ಅಷ್ಟೊತ್ತಿಗೆ ಸರಿಯಾಗಿ ಲಿಂಗಾಯಿತರ ಹಾಸ್ಟೆಲೊಂದಕ್ಕೆ ಬೆಂಕಿ ತಗುಲಿತು. ಅಗ್ನಿಶಾಮಕ ದಳದವರು ಹಾನಿಯಾಗದಂತೆ ಅದು ಆರಿಸಿದರು. ಇನ್ನೊಂದು ಕಡೆ ಆದರ್ಶ ಹೋಟೆಲಿನ ಮಾಲೀಕ ಶ್ರೀನಿವಾಸರವರ ಹೆಂಡತಿಯನ್ನು ಯಾರೊ ಹಿಡಿದುಕೊಂಡರು ಅಂಥ ಸುದ್ದಿ. ಕೈಮಾಡಿದರು ಅಂತ ಸುದ್ದಿ. ಹೀಗೆ ಸುದ್ದಿಗಳ ಮೇಲೆ ಸುದ್ದಿ ಸೇರಿ ಪತ್ರಿಕೆಗಳಲ್ಲಿ "ಕಾಂಗ್ರೆಸ್ ಗೂಂಡಾಗಳಿಂದ ಜನತಾ ಪಕ್ಷದ ಅಧ್ಯಕ್ಷರ ಹೆಂಡತಿಯ ಮೇಲೆ ಹಲ್ಲೆ, ಲೂಟಿ" "ನ್ಯಾಯಾಂಗದ ತನಿಖೆಯಾಗಲಿ" ಇತ್ಯಾದಿ ಹೇಳಿಕೆಗಳು ಪ್ರಕಟವಾದವು. ಜನತಾ ಪಕ್ಷ ಕೊಳ್ಳೇಗಾಲದಲ್ಲಿ ತನ್ನ ಬಾವುಟ ನೆಟ್ಟಿತು.

ಚನ್ನಪ್ಪ, ನಿಂಗರಾಜು, ಜೋಸೆಫ್. ಸಿದ್ದರಾಜು. ನಾಗರಾಜು. ಎಸ್. ಸಿದ್ದರಾಜು, ಸಿ. ಸಿದ್ಧರಾಜು. ಮಹದೇವಪ್ಪ, ಸಿದ್ದರಾಜು, ಲಿಂಗರಾಜು, ಜಿ. ಲಿಂಗರಾಜು ಇತ್ಯಾದಿ ದಲಿತ ಯುವಕರನ್ನು ಪೋಲೀಸರು ಹುಡುಕತೊಡಗಿದರು. ಯಾಕೆ ಅಂತ ಕೇಳಲಾಗಿ ಇವರ ಮೇಲೆ ಕ್ರಿಮಿನಲ್ ಕೇಸು ಹಾಕಲಾಗಿದೆ ಅಂತ ತಿಳಿಯಿತು. ಯಾವ ಗಲಾಟೆಯಲ್ಲೂ ಭಾಗವಹಿಸದ ಈ ಹನ್ನೊಂದು ಜನ ದಲಿತ ಯುವಕರನ್ನ ಅರೆಸ್ಟು ಮಾಡಿ ಕೋರ್ಟಿನ ಮುಂದೆ ನಿಲ್ಲಿಸಿದರು. ಆದರೆ ದಲಿತರನ್ನು ಥಳಿಸಿದ್ದಕ್ಕಾಗಿ, ವಿದ್ಯಾರ್ಥಿ ನಿಲಯಕ್ಕೆ ಬೆಂಕಿ ಇಟ್ಟು ಲೂಟಿ ಮಾಡಿದ್ದಕ್ಕಾಗಿ ಯಾವ ಮೇಲ್ಜಾತಿಯವನ ಮೇಲೂ ಕ್ರಮ ತೆಗೆದುಕೊಳ್ಳಲಿಲ್ಲ.

ಇಷ್ಟೊತ್ತಿಗೆ ಕೊಳ್ಳೇಗಾಲದಲ್ಲಿ ತಮ್ಮ ಹಿಡಿತ ಕಳೆದುಕೊಳ್ಳುತ್ತಿರುವ ಸೂಚನೆ ಕಂಡು ಗಲಿಬಿಲಿಗೊಂಡ ಕಾಂಗ್ರೆಸ್ಸಿಗರು ಹರಿಜನ ಬೀದಿಗಳಲ್ಲಿ ತಿರುಗಾಡತೊಡಗಿದರು. ನಾವು ಹರಿಜನರ ಪರ ಇದ್ದೇವೆ ಎನ್ನುವಂತೆಪತ್ರಿಕೆಹೇಳಿಕೆಗಳನ್ನು ಕೊಟ್ಟರು. ದಲಿತರನ್ನು ಮತ್ತೆ ಕಾಂಗ್ರೆಸ್ಸೀಕರಣಗೊಳಿಸಲು ಪ್ರಯತ್ನಿಸಿದರು.

**ತಲೆಗಳು ಉರುಳಬಹುದು**

ಕೊಳ್ಳೇಗಾಲದ ಘಟನೆ, ಹೊರಕ್ಕೆ ಜನತಾ-ಕಾಂಗ್ರೆಸ್ ಜಗಳ ಎನ್ನುವಂತೆ ಕಾಣುತ್ತಿದ್ದು ಒಳಗೇ ದಲಿತರು ಮತ್ತು ಮೇಲ್ಜಾತಿಯವರ ನಡುವಿನ ಜಗಳವಾಗಿ ದ್ವೇಷ ದಿನೇ ದಿನೇ ಬೆಳೆಯುತ್ತಾ ಬಂತು. ದ್ವೇಷವನ್ನು ಜನತಾ ಮತ್ತು ಕಾಂಗ್ರೆಸ್ ಪಕ್ಷಗಳು ನೀರುಯ್ದು ಬೆಳೆಸಿದುವು. ದಲಿತರೆಲ್ಲ ಒಂದುಕಡೆ, ಮೇಲ್ಜಾತಿಯವರೆಲ್ಲ ಒಂದುಕಡೆ ಗುಪ್ತಸಭೆ ಸೇರಿ ಮುಂದೇನು ಮಾಡಬೇಕೆಂದು ನಿರ್ಧರಿಸಿಕೊಂಡರು. ಯಾವ ಸಮಯಕ್ಕೆ ಬೇಕಾದರೂ ಕೊಳ್ಳೇಗಾಲದಲ್ಲಿ ತಲೆಗಳುರುಳಬಹುದು ಎನ್ನುವ ಮಟ್ಟಕ್ಕೆ ಪರಿಸ್ಥಿತಿ ಬಂತು.

–ಕೊಳ್ಳೇಗಾಲದ ಗಲಭೆ ನಡೆದು ಇಲ್ಲಿಗೆ ಎರಡು ತಿಂಗಳಾಗುತ್ತಾ ಬಂದಿದ್ದರೂ ಕೊಳ್ಳೇಗಾಲದ ದಲಿತರ ಮತ್ತು ಮೇಲ್ಜಾತಿಯವರ ನಡುವಿನ ದ್ವೇಷ ಇನ್ನೂ ಹೊಗೆಯಾಗುತ್ತಲೇ ಇದೆ. ಯಾವ ಸಮಯಕ್ಕೆ, ಎಂಥ ಘಟನೆ ಬೇಕಾದರೂ ನಡೆಯಬಹುದು ಎನ್ನುವ ಪರಿಸ್ಥಿತಿ ಈಗಲೂ ಇದೆ. ಯಾಕೆಂದರೆ ನಿರಪರಾಧಿ ದಲಿತ ಯುವಕರ ಮೇಲೆ ಮೇಲ್ಜಾತಿಯವರು ಹಾಕಿರುವ ಸುಳ್ಳು ಕ್ರಿಮಿನಲ್ ಕೇಸು ಇನ್ನೂ ಹಾಗೇ ಇದೆ.

ಈ ಒಂದು ವಿಷಯ ಸಾಕು, ಕೊಳ್ಳೇಗಾಲದಲ್ಲಿ ಯಾವ ಸಮಯಕ್ಕೆ ಎಂಥ ಘಟನೆಗಳನ್ನು ಬೇಕಾದರೂ ಹುಟ್ಟಿಸುತ್ತದೆ. ●

# ಭದ್ರಾವತಿ ಸಮೀಪ ಭೀಕರ ಕೊಲೆ....

[1ನೇ ಪುಟದಿಂದ]

ಮಾಡಿ ಮಲಗುವ ಸಮಯ. ಲೋಕೇಶಪ್ಪ, ಆತನ ಅಣ್ಣ ಕರಿಬಸಪ್ಪ, ಮತ್ತು ತಮ್ಮಂದಿರು ಪರ್ವತಪ್ಪ, ಚಂದ್ರಪ್ಪ, ಮಾವ, ಕೆಂಡಪ್ಪರ ಷಣ್ಮುಖಪ್ಪ. ಪಂಚಾಯಿತಿ ಮೆಂಬರುಗಳಾದ ಮಕ್ಕೋಡರ ಬಸಪ್ಪ, ಹಳ್ಳಿಹಳ್ಳಿ ಶಿವಲಿಂಗಪ್ಪ. ಹಾಗೆಯೇ ಪಕ್ಕದ ಮನೆ ಕೋಡಮಗ್ಗೇರ ಮಲ್ಲೇಶಪ್ಪ ಇವರುಗಳುಹರಿಜನ ಕಾಲೋನಿಗೆ ಬಂದು ಮಲಗಲು ತಯಾರಿ ಮಾಡಿಕೊಳ್ಳುತ್ತಿದ್ದ ಸಂಗಪ್ಪನನ್ನು "ನಿನ್ನದೊಂದು ಲೆಕ್ಕಾಚಾರವಿದೆ. ಇತ್ಯರ್ಥ ಮಾಡಬೇಕು ಬಾರೋ ಸಂಗ" ಎಂದು ಕರೆದರು. ಸಂಗಪ್ಪನು "ಈ ಹೊತ್ತಿನಲ್ಲಿ ಏನು ಲೆಕ್ಕಾಚಾರ. ಬೆಳಿಗ್ಗೆ ಬರುತ್ತೇನೆ ನಡಿಯಣ್ಣ" ಎಂದ. "ಈ ಕ್ಷಣ ತಿರುಗಿ ಬರುವಂತೆ ಬಾರೋ" ಎಂದು ಕರೆದುಕೊಂಡು ಹೋದರು. ಸಂಗಪ್ಪನು ಪತ್ನಿ ರಂಗಮ್ಮನಿಗೆ "ನೀನು ಮಲಗಿಕೋ ನಾನು ಬರ್ತೀನಿ" ಎಂದು ಹೇಳಿಹೋದ. ತಿರುಗಿ ಬರುತ್ತೇನೆ ಎಂದು ಹೇಳಿ ಹೋದ ಸಂಗಪ್ಪ ತಿರುಗಿ ಬರಲಿಲ್ಲ ಮಾರನೆ ದಿನ (13ನೇ ತಾರೀಖು) ಹಳ್ಳಿಹಳ್ಳಿ ಶಿವಲಿಂಗಪ್ಪನ ತೋಟದಲ್ಲಿ ಸತ್ತುಬಿದ್ದಿರುವ ಸುದ್ದಿ ಬಂತು.

ತೋಟದ ಮಧ್ಯೆ, ಹತ್ತು ಅಡಿಗಿಂತಲೂ ಕಡಿಮೆ ಎತ್ತರದ ಒಂದು ತೆಂಗಿನ ಮರ. ಅದರ ಕೆಳಗೆ ಬುಡಕ್ಕೆ ಒಂದು ಅಥವಾ ಎರಡು ಅಡಿ ಅಂತರದಲ್ಲಿ ಎರಡು ಕೈಗಳನ್ನ ಕತ್ರಿ ಮಾಡಿ ಎದೆಗೆ ಅವಚಿಕೊಂಡು, ಕಾಲುಗಳನ್ನು ಒಂದರ ಮೇಲೊಂದು ಹಾಕಿಕೊಂಡು ಸಂಗಪ್ಪನ ದೇಹ ಬೋರಲಾಗಿ ಮುಕಡೆ ಬಿದ್ದಿತ್ತು. ಆಕಸ್ಮಾತ್ ಮರದಿಂದ ಜಾರಿ ಏಟು ಬಿದ್ದಿದ್ದರೆ ದೇಹ ಒದ್ದಾಡಬೇಕಿತ್ತು. ಆದರೆ ಪೂರ್ಣ ಉಳುತೆ ಮಾಡಿದ ಆ ಭೂಮಿಯಲ್ಲಿ ಒದ್ದಾಡಿದ ಯಾವ ಗುರುತೂ ಇರಲಿಲ್ಲ.

ಭದ್ರಾವತಿ ರೂರಲ್ ಇನ್‌ಸ್ಪೆಕ್ಟರ್ ಶ್ರೀ ಹನುಮಂತಯ್ಯನವರು. ದಫೇದಾರ್ ಗುಂಡಪ್ಪ, ಒಬ್ಬ ಕಾನ್‌ಸ್ಟೇಬಲ್ ಹೆಣದ ಹತ್ತಿರ ಹಾಜರಿದ್ದು ಹೆಣವನ್ನು ಮಹಜರ್ ಮಾಡಲಾಯಿತ್ತು.

ಬೋರಲಾಗಿ ಮುಕಡೆ ಬಿದ್ದ ಹೆಣವನ್ನು ಅಂಗಾತ ಮಾಡಿದರು. ಹೊಡೆತದಿಂದ ಮುಖವೆಲ್ಲ ಜಜ್ಜಿಹೋಗಿ ರಕ್ತಮಯವಾಗಿತ್ತು. ಚೆನ್ನಾಗಿ ಅಮುಕಿದ್ದರಿಂದ ಕತ್ತಿನ ಭಾಗವೆಲ್ಲ ಹಸಿರುಗಟ್ಟಿತ್ತು. ನಾಲಿಗೆ ಪೂರ್ತಿ ಹೊರಚಾಚಿ ಹಲ್ಲಿನಿಂದ ಕಚ್ಚಿತ್ತು. ಎರಡು ಪಕ್ಕೆಗಳಲ್ಲೂ ಹೊಡೆತದ ಗುರುತುಗಳಿದ್ದವು. ಅಂಡಾಶಯಗಳು ಜಜ್ಜಿಹೋಗಿ ಎರಡು ಬದ್ದೆಗಳು ಪೂರ್ಣ ರಕ್ತಮಯವಾಗಿದ್ದವು. ಕೈಮೇಲೆ ಹೊಡೆತದ ಗಾಯಗಳಿದ್ದವು. ಹೆಣದ ಸುತ್ತ ನಾಲ್ಕಾರು ತೆಂಗಿನಕಾಯಿಗಳನ್ನು ಕೆಡವಲಾಗಿತ್ತು. ಮರದಿಂದ ಜಾರಿಬಿದ್ದಾಗ ಮುಖ ಮತ್ತು ಅಂಡಾಶಯಗಳು ಜಜ್ಜಿ ಹೋಗುವಂಥ ಯಾವ ಕಲ್ಲು ಬಂಡೆಯೂ ಮರದ ಕೆಳಗಿರಲಿಲ್ಲ. ಶವ ಬಿದ್ದ ಜಾಗದಿಂದ 2೯ ಅಡಿಗಳ ಅಂತರದಲ್ಲಿ ಹೊಸ ಗುಂಡಿಯನ್ನು ತೋಡಲಾಗಿತ್ತು. ಅದರ ಪಕ್ಕದಲ್ಲಿ ಸುಮಾರು ಒಂದೂವರೆ ಅಡಿ ಸುತ್ತಳತೆಯ ಒರಳು ಕಲ್ಲು ಬಿದ್ದಿತ್ತು. (ಆದರೆ ಇಷ್ಟನ್ನು ಮಾತ್ರ ಪೋಲೀಸರು ಮಹಜರ್ ಮಾಡಿಕೊಳ್ಳಲಿಲ್ಲ).

ಹೆಣವನ್ನ ಮಹಜರ್ ಮಾಡುತ್ತಿದ್ದಾಗ ಮೃತನ ಪತ್ನಿ ಹಾಗೂ ಸಂಬಂಧಿಗಳು ಲೋಕೇಶಪ್ಪನೇ ಕೊಲೆ ಅಪರಾಧಿ ಎಂದು ನೆರೆದ ಜನರ ಮಧ್ಯೆ ಹೇಳಿಕೆ ಕೊಟ್ಟಾಗ ತಕ್ಷಣ ಸಬ್ ಇನ್‌ಸ್ಪೆಕ್ಟರ್ ಮಹಜರ್ ನಿಲ್ಲಿಸಿ ಅಲ್ಲೇ ಇದ್ದ ಲೋಕೇಶಪ್ಪನ ಜೊತೆ ಊರೊಳಗೆ ಹೋದವರು ಒಂದು ಗಂಟೆ ಬಿಟ್ಟು ಬಂದು ಮಹಜರ್ ನಡೆಸಿ ಮಹಜರ್‌ಗೆ ಲೋಕೇಶಪ್ಪನದೇ ಸಹಿ ತೆಗೆದುಕೊಂಡಿರುವುದು ಚೋದ್ಯ ಸಂಗತಿಯಾಗಿದೆ!

ಈ ಕೊಲೆಯ ಬಗ್ಗೆ ಐ.ಜಿ.ಪಿ, ಸಮಾಜ ಕಲ್ಯಾಣ ಮಂತ್ರಿ, ರಾಜ್ಯಪಾಲರಿಗೆ ದೂರು ಕೊಟ್ಟಿದ್ದರೂ ಇದ್ದುವರೆಗೂ ಯಾವುದೇ ಕ್ರಮ ತೆಗೆದ ಕೊಂಡಿಲ್ಲ. ಮತ್ತು ಅಪರಾಧಿಯ ರಕ್ಷಣೆಗೆ ಹರಿಜನರೇ ಆದ ಸಹಕಾರ ಮಂತ್ರಿ ಕೆ. ಹೆಚ್. ರಂಗನಾಥ್ ಕೈವಾಡವೂ ಇದೆ ಎಂದು ವದಂತಿ ಹಬ್ಬಿದೆ. ●



ಸಂಪಾದಕ ಮತ್ತು ಪ್ರಕಾಶಕ : ರಾಮದೇವ ರಾಕೆ, ವಿಳಾಸ : ದಲಿತ ಸಂಘರ್ಷ ಸಮಿತಿ, ಭದ್ರಾವತಿ. ಮುದ್ರಣ : ಶ್ರೀ ಮಂಜುನಾಥ ಪ್ರಿಂಟರ್ಸ್, ಭದ್ರಾವತಿ.